# ಅಚಲ

ನವೆಂಬರ್ 1999

ತಿಂಗಳ ಪತ್ರಿಕೆ


## ಒಳಪುಟಗಳಲ್ಲಿ




ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

'ಅಚಲ'

ಸಂಪುಟ - 13 ಸಂಚಿಕೆ - 3



ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ.ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

*ಬದಲಾದ ವಿಳಾಸಗಳನ್ನು ದಯವಿಟ್ಟು ಬರೆದು ತಿಳಿಸಿ.*

*Achala - Edited by* **Dr. N. Gayathri**
**Published by Dr. G. Ramakrishna on behalf of Jagruthi Mahila Adhyayana Kendra,**
**14-P, Vidyapeeta Road, BSK III Stage, Bangalore - 560 085**

***Printed at***
**Lipi Mudrana**
**Bangalore - 560 004**

*ಆತ್ಮೀಯರೇ,*

*ಕಳೆದ 12 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಕಳೆದ ಏಪ್ರಿಲ್ ಸಂಚಿಕೆಯಿಂದ ಅಚಲ ಪತ್ರಿಕೆ ಪ್ರಕಟವಾಗಿಲ್ಲ. ಹೆಚ್ಚಿದ ಅಂಚೆ ದರದಲ್ಲಿ ಪತ್ರಿಕೆಯನ್ನು ತರುವುದು ನಮಗೆ ಅಸಾಧ್ಯದ ವಿಷಯವಾಗಿತ್ತು. ಆದ್ದರಿಂದ ದ್ವೈಮಾಸಿಕ ಪತ್ರಿಕೆಯನ್ನು ಮಾಸಿಕವನ್ನಾಗಿ ತರುವ ನಿರ್ಧಾರದಿಂದ ಸರ್ಕಾರಿ ಕಛೇರಿಗಳಿಗೆ ಅಲೆದಾಡಿ ಅಂಚೆ ರಿಯಾಯಿತಿಯನ್ನು ಗಳಿಸಿಕೊಳ್ಳುವ ವೇಳೆಗೆ ಆರು ತಿಂಗಳೇ ಕಳೆದು ಹೋದವು. ಈ ಅವಧಿಯಲ್ಲಿ ಪತ್ರಿಕೆಯನ್ನು ಹೊರತರಲಾಗದ ನಮ್ಮ ಅಸಾಮರ್ಥ್ಯಕ್ಕೆ ನಿಮ್ಮ ಕ್ಷಮೆ ಕೇಳುತ್ತೇವೆ.*

*ಅಚಲ ಅಕ್ಟೋಬರ್ ಸಂಚಿಕೆಯಿಂದ ಮಾಸಿಕವಾಗಿ ಹೊರಬರುತ್ತಿದೆ. ಎಂದಿನಂತೆ ನಿಮ್ಮ ಪ್ರೋತ್ಸಾಹವನ್ನು ನಿಮ್ಮಿಂದ ನಿರೀಕ್ಷಿಸುತ್ತೇವೆ.*

**ಅಚಲದ ಚಂದಾ ವಿವರಗಳು ಹೀಗಿವೆ :**

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)

ಆಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

'ಅಚಲ' ಪತ್ರಿಕೆಗೆ ಚಂದಾದಾರರಾಗಿರಿ. ಚಂದಾ ನವೀಕರಿಸಿ
ಮತ್ತು
ನಿಮ್ಮ ಆಪ್ತರನ್ನೂ ಚಂದಾದಾರರನ್ನಾಗಿಸಿ.

ಗಮನಿಸಿ

**ಅಚಲ** ವಿಳಾಸ ಬದಲಾಗಿದೆ

*108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ, ಬನಶಂಕರಿ, 3ನೇ ಹಂತ, ಬೆಂಗಳೂರು - 560 085*

# ಖಂಡನಾರ್ಹ ಫ್ಯಾಸಿಸ್ಟ್ ಶಕ್ತಿಗಳು

ಚುನಾವಣೆಗಳ ಗಲಾಟೆಯೆಲ್ಲಾ ಮುಗಿದು ಕೇಂದ್ರದಲ್ಲಿ ಬಿ.ಜೆ.ಪಿ ಸಂಮಿಶ್ರ ಸರ್ಕಾರ ಮತ್ತು ರಾಜ್ಯದಲ್ಲಿ ಕಾಂಗ್ರೆಸ್ ಸರ್ಕಾರ ಬಂದಿದೆ. ಸೊಸೆ-ಮಗಳು ಪಾತ್ರದ ಮಾದರಿಗಳನ್ನು ವಿದೇಶಿ-ಸ್ವದೇಶಿ . ಘೋಷಣೆಗಳನ್ನು ಘೋಷಿಸಿಕೊಂಡು ಅಧಿಕಾರದ ಗದ್ದುಗೆಯೇರಿರುವ ಸರ್ಕಾರಗಳ ಕಾರ್ಯಕ್ಷಮತೆಯ ಬಗೆಗೆ ಜನಸಾಮಾನ್ಯ ಎಂತಹ ನಿರೀಕ್ಷೆಯನ್ನು ಹೊಂದಹುದು ಎಂದು ಚಿಂತಿಸುತ್ತಿರುವಾಗಲೇ ಆರಂಭದ ಪ್ರಕೃತಿಯ ವಿಕೋಪ ದುರಂತದ ನಾಂದಿಯನ್ನೇ ಹಾಡಿದೆ. ಪ್ರಕೃತಿಯ ವಿಕೋಪಕ್ಕೆ ಮಾನವ ಹೊಣೆಯಲ್ಲವಾದರೂ ಇಂದು ನಮ್ಮ ದೇಶದಲ್ಲಿ ಸಂಸ್ಕೃತಿಯ ಹೆಸರಿನಲ್ಲಿ ನಡೆಯುತ್ತಿರುವ ವಿಕೃತಿಗಳು ನಮ್ಮೆಲ್ಲರನ್ನೂ ಆತಂಕದ. ಭಯಾನಕ ಸನ್ನಿವೇಶಗಳಲ್ಲಿ ಮುಳುಗಿಸುತ್ತಿವೆ.

ಚುನಾವಣೆಯ ಸಂದರ್ಭದಲ್ಲಿ ನಮ್ಮ ಪ್ರಮುಖ ರಾಜಕೀಯ ಪಕ್ಷಗಳು ಜನಪರವಾದ. ಆರ್ಥಿಕ ಸಾಮಾಜಿಕ ವಿಷಯಗಳನ್ನು ಪ್ರಸ್ತಾಪಿಸದೆ ಕೇವಲ ವ್ಯಕ್ತಿನಿಂದೆಗಳು. ಸಂಸ್ಕೃತಿಯ ಭಾವುಕ ಅಂಶಗಳನ್ನು ಕೆದಕಿ ಮತದಾರನನ್ನು ಕ್ಷುಲ್ಲಕರೆಂದು ಭಾವಿಸಿದ್ದು ಇನ್ನೂ ಜನರ ನೆನಪಿನಿಂದ ಮಾಸಿಲ್ಲ. ಇಬ್ಬರು ಮಹಿಳೆಯರ ಸುತ್ತ ಇಡೀ ರಾಷ್ಟ್ರದ ರಾಜಕಾರಣ ನಿಂತಿದೆಯೋ ಎನ್ನುವ ಭ್ರಮೆ ಹುಟ್ಟಿಸುವ ಪ್ರಯತ್ನಗಳೂ ನಡೆದದ್ದುಂಟು. ಸೋನಿಯಾ ಸುಷ್ಮ ಕೂಡ ತಮ್ಮ ಸ್ತ್ರೀಪರ ನಿಲುವನ್ನು ತಮ್ಮ ಕಾರ್ಯಕ್ರಮ. ಯೋಜನೆಗಳ ಮೂಲಕ ಜನತೆಯ ಮುಂದೆ ಬಿಚ್ಚಿಡದೆ ಕೇವಲ ತಾಯ್ತನದ ಕಣ್ಣೀರು ಹರಿಸಿ. ಹರಿಸಿನ-ಕುಂಕುಮದ ಸೌಭಾಗ್ಯದ ಬಣ್ಣ ಬಿಡಿಸಿ 'ಭಾರತೀಯ ಸಂಸ್ಕೃತಿ'ಯ ಖಾಲಿತನವನ್ನು ಪ್ರದರ್ಶಿಸುವಲ್ಲಿ ಸಫಲರಾದರು.

ಬೈತಲೆಯಲ್ಲಿ ಮೊಳದುದ್ದ ಕುಂಕುಮ ಏರಿಸಿ ಮುತ್ತೈದೆ ಭಾಗ್ಯ ಪ್ರದರ್ಶಿಸಿದ ಸುಷ್ಮಾರವರ ಚರ್ಯೆ ನಮ್ಮ ಭಾರತೀಯ ಸಾಂಪ್ರದಾಯಿಕ ಮನಸ್ಸುಗಳಿಗೆ ಆಪ್ಯಾಯಮಾನವಾಗಿರಬಹುದು. ಆದರೆ ಅದು ಹುಟ್ಟು ಹಾಕುವ ನಂಬಿಕೆಗಳು. ಆಲೋಚನಾ ವಿಧಾನ ಗಾಬರಿ ಹುಟ್ಟಿಸುವಂತಹುದೇ. ಈಗ ಉತ್ತರ ಪ್ರದೇಶದಲ್ಲಿ ಸತ್‌ಪುರವಾನ್ ಗ್ರಾಮದ ಚರನ್ ಶಾ 'ಸತಿ' ಹೋದ ಪ್ರಕರಣದ ಹಿಂದೆ ಇಂತಹ ಅಂಶಗಳೂ ಕೆಲಸ ಮಾಡುತ್ತಿಲ್ಲವೇ ? ಹಲವಾರು ವರ್ಷಗಳಿಂದ ಕ್ಷಯಪೀಡಿತ ರೋಗಿಷ್ಟ ಪತಿಯ ಆರೈಕೆಯಲ್ಲಿ ಜೀವನದ ಬಹುಭಾಗ ಕಳೆದ ಐವತ್ತೈದು ವರ್ಷ

ವ ಯ ಾ ಸಿ ನ

ಚರನ್ ಶಾಳ ಮನಸ್ಸಿನ ತಳಮಳಗಳು ಈಗ ಅರ್ಥವಾಗುವುದು ಕಷ್ಟವಾದರೂ ಅವಳ ಸಾವು ಆತ್ಮಹತ್ಯೆಯಿರಲಿ 'ಸತಿ'ಯಾಗಿರಲಿ ಅದನ್ನು ಲಾಭ ಮಾಡಿಕೊಳ್ಳುತ್ತಿರುವ ಆ ಪ್ರದೇಶದ ಜನಗಳು ಮತ್ತು ಸಮೂಹ ಸನ್ನಿಗೆ ಒಳಗಾಗಿರುವ ನೆರೆಹೊರೆಯ ಭಕ್ತಾದಿಗಳು ಎಂತಹ ಜೀವವಿರೋಧಿ ಮೌಲ್ಯವನ್ನು ಆರಾಧಿಸುತ್ತಿರಬಹುದು ಎಂಬುದು ಸ್ಪಷ್ಟವಾಗುತ್ತದೆ. ಇಪ್ಪತ್ತೊಂದನೆಯ ಶತಮಾನಕ್ಕೆ ಹೆಜ್ಜೆಯಿಟ್ಟಿರುವ ಸಂದರ್ಭದಲ್ಲೂ ಇನ್ನೂ ಇಂತಹ ನಂಬಿಕೆ. ಆಚರಣೆಗಳು ನಮ್ಮಲ್ಲಿ ಸಜೀವವಾಗಿ ಉಸಿರಾಡುತ್ತಿರುವಾಗ ಎಂತಹ 'ಭವ್ಯ ಸಂಸ್ಕೃತಿ' ಯ ಬಗ್ಗೆ ಹೆಮ್ಮೆ ಪಡಬೇಕು ? ಇದೇ ಸಂದರ್ಭದಲ್ಲಿ ಮಿಾರತ್‌ನ ಸತಿದೇವಾಲಯವನ್ನು ವೈಭವಿಸುತ್ತಿರುವ ಪ್ರಯತ್ನಗಳೂ ಪ್ರಕಟವಾಗುತ್ತಿವೆ. ಇವೆಲ್ಲಾ ನಾವು ಹಿಂದಡಿಯಿಡುತ್ತಿರುವ ಹೆಜ್ಜೆಗಳಂತೂ ಆಗಿವೆ.

ಇತ್ತೀಚೆಗೆ ಬೆಂಗಳೂರಿನ ಸಮಿಾಪ ನಡೆದ ಮತ್ತೊಂದು ಪ್ರಕರಣ ಇಂತಹುದೇ ಮೂಢನಂಬಿಕೆಯ ಮತೀಯ ಭಾವನೆಗಳ ದುರಾಕ್ರಮಣದ ಸಜೀವ ನಿದರ್ಶನವಾಗಿದೆ. ಬೆಂಗಳೂರಿನ ಅನೇಕಲ್‌ಗೆ ಹದಿಮೂರು 13 ಕಿ. ಮಿಾ.ಟರ್ ದೂರವಿರುವ ಮೈಸೂರಮ್ಮನ ದೊಡ್ಡಿಯಲ್ಲಿ ರಾಷ್ಟ್ರೀಯ ಸ್ವಯಂ ಸೇವಾಯೋಜನೆಯಡಿ ಸಮಾಜಕಾರ್ಯಕ್ಕಾಗಿ

ಹೋದ ವಿದ್ಯಾರ್ಥಿ-ವಿದ್ಯಾರ್ಥಿನಿಯರ ಮೇಲೆ ನಡೆದ ಮತೀಯವಾದಿಗಳ ಹಲ್ಲೆ ನಡೆಯಿತು. ಕಳೆದ ಮೇ ತಿಂಗಳಿನಲ್ಲಿ ಇದೇ ಆನೇಕಲ್‌ನಲ್ಲಿ ಸಮುದಾಯ ಕಲಾವಿದರ ಮೇಲೆ ಮತೀಯ ಶಕ್ತಿಗಳು ನಡೆಸಿರುವ ಹಲ್ಲೆಯ ನೆನಪಿನ್ನೂ ಮಾಸದಿರುವಾಗಲೇ ಅದೇ. ಜಿಲ್ಲೆಯಲ್ಲಿ ಮತ್ತೊಂದು ಈ ಭಯಾನಕ ಕೃತ್ಯ ನಡೆದಿರುವುದು ಪ್ರಜಾತಂತ್ರ ವ್ಯವಸ್ಥೆಯ ಅಣಕದಂತಿದೆ. ನಗರದ ಸೇಂಟ್ ಜೋಸೆಫ್ ಕಾಲೇಜಿನ ಸುಮಾರು ಹತ್ತೊಂಭತ್ತು ವಿದ್ಯಾರ್ಥಿಗಳು ಮತ್ತು ಏಳು ಮಂದಿ ವಿದ್ಯಾರ್ಥಿನಿಯರು ಸೆಪ್ಟೆಂಬರ್ ಮೊದಲವಾರದಲ್ಲಿ ಮೈಸೂರಮ್ಮನ ದೊಡ್ಡಿಗೆ ಸ್ವಯಂ ಸೇವಾ ಶಿಬಿರಕ್ಕೆಂದು ಹೋದರು. ಈ ಕಾಲೇಜು ಕ್ರೈಸ್ತ ಕಾಲೇಜಾದ್ದರಿಂದ ಮತೀಯರ ಕೆಂಗಣ್ಣಿಗೆ ಗುರಿಯಾಗಿದೆ. ಸೆಪ್ಟೆಂಬರ್ 3ರಂದು ರಾತ್ರಿಯ ವೇಳೆ ವಿದ್ಯಾರ್ಥಿಗಳು ಊಟ ಮಾಡುತ್ತಿದ್ದ ಸಮಯದಲ್ಲಿ ಸುಮಾರು 30 ರಿಂದ 35 ರಷ್ಟು ಮಂದಿ ಹಾರೆ, ಕೋಲುಗಳೆತ್ತಿಕೊಂಡು ಬಂದು ವಿದ್ಯಾರ್ಥಿ ಸಮೂಹವನ್ನು ಹಿಡಿದೆಳೆದಾಡಿ ನಡುಗಿಸಿದ್ದಾರೆ. ವಿದ್ಯಾರ್ಥಿಗಳ ಮೇಲೆ ಕೈ ಮಾಡಿ ಥಳಿಸಿದ್ದರೆ ವಿದ್ಯಾರ್ಥಿನಿಯರನ್ನು ನಡೆಸಿಕೊಂಡ ರೀತಿ ಇನ್ನೂ ಅಸಹ್ಯವಾಗಿತ್ತು. ಅಡಿಗೆ ಬಡಿಸುತ್ತಿದ್ದ ವಿದ್ಯಾರ್ಥಿನಿಯರ ಕೈಯಿಂದ ಪಾತ್ರೆ ಕಿತ್ತು ಅವರ ಮುಖ ಮೈಗಳಿಗೆ ಊಟ ಎರಚಿ, ಅವರನ್ನು ಅಕ್ಕ ತಂಗಿ ಎಂದು ಕರೆಯುತ್ತಲೇ ಕೀಚಕನ ಸ್ವರೂಪ ಪ್ರಕಟಿಸಿದ್ದಾರೆ.

ತಮ್ಮ ಕಾಲೇಜು ಅಭ್ಯಾಸದ ಭಾಗವಾಗಿ ನಡೆಯುವ ಈ ಸ್ವಯಂ ಸೇವಾ ಯೋಜನೆಯ ಚಟುವಟಿಕೆಗಳು ಗ್ರಾಮಸ್ಥರಿಗೆ ಜಾಗೃತಿಯ ಕಾರ್ಯಕ್ರಮವಾಗುವುದಕ್ಕಿಂತ ಹೆಚ್ಚಾಗಿ ವಿದ್ಯಾರ್ಥಿಸಮೂಹಕ್ಕೆ ಜಾಗೃತಿ ನೀಡಲೆಂದು ಯೋಚಿತವಾದದ್ದು. ನಗರದ ಸುಸಜ್ಜಿತ ಅನೂಕೂಲಗಳಲ್ಲಿ ವಾಸಿಸುವ ಯುವಜನತೆಗೆ ನಮ್ಮ ಗ್ರಾಮಗಳ ನೈರ್ಮಲ್ಯದ ಸ್ಥಿತಿ, ಆರೋಗ್ಯ, ಬಡತನ, ಅನಕ್ಷರತೆಯ ಪರಿಚಯ ಮಾಡಿಕೊಡುತ್ತಲೇ ಮುಂದೆ ಅವರು ಭವಿಷ್ಯದಲ್ಲಿ ವಹಿಸಬೇಕಾದ ಸಾಮಾಜಿಕ ಜವಾಬ್ದಾರಿಯನ್ನು ಸಾಂಕೇತಿಕವಾಗಿ ರೂಪಿಸುವ ಕಾರ್ಯಕ್ರಮ ಇದು. ಇದನ್ನು ಎಲ್ಲಾ ಕಾಲೇಜಿನ ವಿದ್ಯಾರ್ಥಿ-ವಿದ್ಯಾರ್ಥಿನಿಯರು ನಡೆಸುವವರಾದರೂ ಈ ಮೈಸೂರಮ್ಮನದೊಡ್ಡಿಗೆ ಸ್ವಯಂ ಸೇವಾ ಯೋಜನೆಗೆಂದು ಹೋದವರು ಸೇಂಟ್ ಜೋಸೆಫ್ ಕಾಲೇಜಿನ ವಿದ್ಯಾರ್ಥಿಗಳಾದದ್ದರಿಂದ ಅವರು ಈ ಅವಗಢ ಎದುರಿಸಬೇಕಾಗಿ ಬಂತು. ಯಾವ ರಾಜಕೀಯ ವಾಸನೆಯೂ ಇಲ್ಲದ ಇಂತಹ ಸೇವಾಕಾರ್ಯಗಳಿಗೂ ರಾಜಕೀಯ ಹಸ್ತಕ್ಷೇಪ ನುಸುಳಬಹುದೆಂದರೆ ಇವತ್ತಿನ ರಾಜಕೀಯದಲ್ಲಿ ಮತೀಯಭಾವನೆಗಳು ವಹಿಸುತ್ತಿರುವ ಪಾತ್ರ ಗಾಬರಿ ಹುಟ್ಟಿಸುತ್ತದೆ.

ಈ ವಿದ್ಯಾರ್ಥಿ ಸಮೂಹದಲ್ಲಿ ಬಹುಪಾಲು ಹಿಂದೂಗಳೇ ಇದ್ದರೂ ಆಕ್ರಮಣಕಾರರು, ಅವರನ್ನು ನೀವು ಮತಾಂತರಗೊಳ್ಳಲು ಎಷ್ಟು ಹಣ ಪಡೆದಿದ್ದೀರಿ? ಎಂದು ಪ್ರಶ್ನಿಸಿರುವುದು ದುರಾಕ್ರಮಣದ ವಿಷಯವಾಗಿದೆ. ಒಂದು ವಾರ ಇರಲೆಂದು ಬಂದ ವಿದ್ಯಾರ್ಥಿಗಳನ್ನು ರಾತ್ರೋರಾತ್ರಿ ಜಾಗ ಖಾಲಿ ಮಾಡಲು ಹೇಳಿ ಅಸ್ಸಾಂ ಮತ್ತು ಒರಿಸ್ಸಾ ಘಟನೆಗಳನ್ನು ನೆನಪಿಸಿರುವುದು ಫ್ಯಾಸಿಸ್ಟ್ ನಡವಳಿಕೆಯೇ ಆಗಿದೆ. ಈ ಘಟನೆಗಳನ್ನು ಯಾವುದೇ ಒಂದು ಚಿಕ್ಕ ಗುಂಪಿನ ಕೃತ್ಯಗಳೆಂದು ಕೈಬಿಡಲು ಸಾಧ್ಯವಿಲ್ಲ. ಸಾರ್ವಜನಿಕವಾಗಿ ಮತೀಯ ಸೌಹಾರ್ದದ ಮಾತನಾಡುತ್ತಲೇ, 'ಸ್ವದೇಶಿ' ಮಂತ್ರವನ್ನು ಪಠಿಸುವ 'ಭವ್ಯ' ಭಾರತೀಯ ಸಂಸ್ಕೃತಿಯ ಗುತ್ತಿಗೆ ಹಿಡಿದವರು ತಾವೆಂದು ಬೀಗುವ ಅಧಿಕಾರಾರೂಡ ಪಕ್ಷಗಳು ತಮ್ಮ ಗುಪ್ತ ರಾಜಕೀಯ ಕಾರ್ಯಕ್ರಮಗಳಾಗಿ ಇಂತಹವುಗಳನ್ನು ಆರಿಸಿಕೊಂಡಿವೆಯೆಂಬುದೂ ಸೂರ್ಯಸ್ಪಷ್ಟವಾಗಿದೆ.

ಈ ಶಿಬಿರದಲ್ಲಿದ್ದ ವಿದ್ಯಾರ್ಥಿನಿಯರ ಮೇಲೆ ಆಕ್ರಮಣಕಾರರು ನಡೆಸಿಕೊಂಡ ರೀತಿ 'ಭವ್ಯಸಂಸ್ಕೃತಿಯ' ಆರಾಧಕರ ವ್ಯಕ್ತಿತ್ವವನ್ನು ಬಯಲು ಮಾಡುತ್ತದೆ. ಹೆಣ್ಣು ಮಕ್ಕಳನ್ನು ಅಕ್ಕ; ತಂಗಿ ಎಂದು ಸಂಭೋಧಿಸುತ್ತಲೇ ಅವರ ಮೇಲೆ ರೌಡಿಗಳಂತೆ ದಾಳಿ ಮಾಡಿರುವುದು ಯಾವ ಫ್ಯಾಸಿಸ್ಟ್ ನಡವಳಿಕೆಗೆ ಕಡಿಮೆಯಾಗಿದೆ ? ಆದ್ದರಿಂದಲೇ ಇಂತಹ ಕೃತ್ಯಗಳನ್ನು ಖಂಡಿಸುತ್ತಲೇ ಇಂತಹ ಕೃತ್ಯಗಳ ಹಿಂದಿರುವ ರಾಜಕೀಯ ಹಿತಾಸಕ್ತಿಗಳ ಬಗೆಗೂ ಜನಜಾಗೃತಿ ಮೂಡಿಸುವ ಜವಾಬ್ದಾರಿ ಮಹಿಳಾ ಚಳುವಳಿಯ ತುರ್ತು ಕಾರ್ಯಕ್ರಮವಾಗಬೇಕಿದೆ.

*- ಎನ್. ಗಾಯಿತ್ರಿ*

# ಲೈಂಗಿಕ ಕಿರುಕುಳದ ಮತ್ತೊಂದು ಪ್ರಕರಣ

ವಿಶಾಖ ತೀರ್ಪಿನ ಹಿನ್ನೆಲೆಯಲ್ಲಿ ಲೈಂಗಿಕ ಕಿರುಕುಳಕ್ಕೆ ಸಂಬಂಧಪಟ್ಟಂತೆ ಸುಪ್ರೀಂ ಕೋರ್ಟು ನೀಡಿದ್ದ ತೀರ್ಪು 'ಲೈಂಗಿಕ ಕಿರುಕುಳ'ದ ಪರಿಕಲ್ಪನೆಯನ್ನು ಪುನರ್ವ್ಯಾಖ್ಯಾನಗೊಳಿಸಿದೆ ; ಅಷ್ಟೇ ಅಲ್ಲ, ವಿಸ್ತಾರಗೊಳಿಸಿದೆ ಕೂಡ. ಈ ವಿಶಾಲಾರ್ಥದ ಪ್ರಯೋಜನದಿಂದ ಇತ್ತೀಚೆಗೆ ಸುಪ್ರೀಂ ಕೋರ್ಟು ಮತ್ತೊಂದು ಚರಿತ್ರಾರ್ಹ ತೀರ್ಪನ್ನು ನೀಡಿದೆ. ಲೈಂಗಿಕ ಕಿರುಕುಳವೆಂದರೆ ದೈಹಿಕ ಸಂಪರ್ಕವನ್ನು ಒಳಗೊಳ್ಳಲೇ ಬೇಕಿಲ್ಲ. ಎಂಬ ತಿಳುವಳಿಕೆಯನ್ನು ಒಳಗೊಂಡ ಎ.ಕೆ. ಚೋಪ್ರಾ ಪ್ರಕರಣದ ತೀರ್ಪು ಮಹಿಳಾ ಚಳುವಳಿಗೆ ಬಲ ನೀಡುವಂತಹುದು ಮತ್ತು ಮಾರ್ಗದರ್ಶಿಯಾದಂತಹುದು.

ಎಪರೆಲ್ ಎಕ್ಸ್‌ಪೋರ್ಟ್ ಪ್ರಮೋಷನ್ ಕೌನ್ಸಿಲ್‌ನಲ್ಲಿ ಟೈಪಿಸ್ಟ್ ಮತ್ತು ಕ್ಲರ್ಕ್ ಆಗಿ ಉದ್ಯೋಗದಲ್ಲಿದ್ದ ಮಹಿಳೆಯೊಬ್ಬಳು ತನ್ನ ಮಾಲೀಕರಿಗೆ ದೂರಿತ್ತಳು. ಛೇರ್‌ಮನ್‌ನ ಆಪ್ತ ಕಾರ್ಯದರ್ಶಿಯು ತನ್ನನ್ನು ಅಸಭ್ಯವಾಗಿ ಹಿಂಸಿಸುತ್ತಿರುವನೆಂದು ತನ್ನ ದೂರಿನಲ್ಲಿ ತಿಳಿಸಿದ್ದಳು. ಅವಳು ಶೀಘ್ರ ಲಿಪಿಕಾರಳಲ್ಲದಿದ್ದರೂ ಅವಳಿಗೆ ತಾಜ್ ಪ್ಯಾಲೆಸ್ ಹೋಟೆಲ್‌ಗೆ ಬರಬೇಕೆಂದು ಟಿಪ್ಪಣಿ ಬರೆದುಕೊಳ್ಳಬೇಕೆಂದೂ ಎ.ಕೆ. ಚೋಪ್ರಾ ಒತ್ತಾಯಿಸಿದುದಾಗಿ ದೂರಿನಲ್ಲಿ ಹೇಳಿದ್ದಳು. ಅಷ್ಟೇ ಅಲ್ಲದೆ, ಅವಳು ಕಛೇರಿಯಲ್ಲಿ ಕೆಲಸ ಮಾಡುವ ಸಂದರ್ಭನಲ್ಲಿ ಅವಳು ಪ್ರತಿಭಟಿಸಿದ್ದಾಗ್ಯೂ ಅವಳ ಸಮೀಪದಲ್ಲಿ ಬಂದು ಕುಳಿತುಕೊಳ್ಳುವುದು, ಅವಳನ್ನು ಮುಟ್ಟುವುದು ಲಿಫ್ಟ್‌ನಲ್ಲಿ ಸಂಚರಿಸುವಾಗ ಅವಳನ್ನು ಹಿಂಸಿಸುವುದು ಮುಂತಾಗಿ ಅಸಭ್ಯರೀತಿಯ ನಡವಳಿಕೆಯನ್ನು ಪ್ರದರ್ಶಿಸುತ್ತಿದ್ದುದಾಗಿ ಮಹಿಳಾ ಉದ್ಯೋಗಿ ದೂರಿತ್ತಳು. ಈ ದೂರಿನ ಆಧಾರದ ಮೇಲೆ ಕಂಪೆನಿಯು ನಿಯೋಜಿಸಿದ್ದ ವಿಚಾರಣಾಸಮಿತಿಯು ಮಹಿಳಾ ಉದ್ಯೋಗಿಯ ಆರೋಪವನ್ನು ಎತ್ತಿ ಹಿಡಿದು ಎ.ಕೆ. ಚೋಪ್ರಾನನ್ನು ತಪ್ಪಿತಸ್ಥನೆಂದು ಸಾರಿತು. ಇದರ ಆಧಾರದ ಮೇಲೆ ಕಂಪೆನಿಯ ಶಿಸ್ತು ಪಾಲನಾ ಸಮಿತಿಯು ಎ.ಕೆ. ಚೋಪ್ರಾನನ್ನು ಕೆಲಸದಿಂದ ವಜಾ ಮಾಡಿತು. ಆದರೆ ಎ.ಕೆ. ಚೋಪ್ರಾ ಈ ದೂರಿನ ವಿರುದ್ಧ ಅವನ ವಿಭಾಗದ ಅಪಿಲೇಟ್ ಅಧಾರಿಟಿಯಲ್ಲಿ ನಂತರ ಹೈಕೋರ್ಟಿನಲ್ಲಿ ಮೊಕದ್ದಮೆ ಹೂಡಿ ತನ್ನ ವಜಾ ಮಾಡಿರುವ ಕ್ರಮವನ್ನು ಪ್ರಶ್ನಿಸಿದ ದೂರಿನಲ್ಲಿ ಅಪರಾಧಿಯು ತನ್ನನ್ನು ಲೈಂಗಿಕವಾಗಿ ಹಿಂಸಿಸಲು ಪ್ರಯತ್ನಿಸಿದನೆಂದು ಹೇಳಿರುವಳೇ ವಿನಃ ಹಿಂಸಿಸಿರುವುದಾಗಿ ಹೇಳಿಲ್ಲ ಎಂಬ ಮಾತಿನ ಆಧಾರದ ಮೇಲೆ ಕಂಪೆನಿಗೆ ಎ.ಕೆ. ಚೋಪ್ರಾನ ವಜಾ ರದ್ದು ಮಾಡಿ 'ಕೆಲಸಕ್ಕೆ ಹಿಂದಕ್ಕೆ ತೆಗೆದುಕೂಳ್ಳುವುದಕ್ಕೆ ಆದೇಶಿಸಿತು. ಆದರೆ ಅವನಿಗೆ ಹಿಂದಿನ ಸಂಬಳವನ್ನು ಕೊಡಬೇಕಾಗಿಲ್ಲವೆಂದು ತಿಳಿಸಿತು. ಅಷ್ಟೇ ಅಲ್ಲದೆ, ಅವನನ್ನು ದೆಹಲಿಯ ಹೊರಗೆಲ್ಲಾದರೂ ಇರುವ ಕಛೇರಿಯಲ್ಲಿ ಎರಡು ವರ್ಷಗಳವರೆಗಾದರೂ ವರ್ಗ ಮಾಡಲು ಸೂಚಿಸಿತು. ನಂತರ ದೆಹಲಿಯ ಹೈಕೋರ್ಟಿನಲ್ಲಿ ವಿಭಾಗೀಯ ಪೀಠವು ಈ ಏಕ ನ್ಯಾಯಮೂರ್ತಿಯ ತೀರ್ಪನ್ನು ಅಲಿಸಿ ಅದನ್ನು ಎತ್ತಿ ಹಿಡಿಯಿತು.

ನಂತರ ಎಪರಲ್ ಎಕ್ಸ್‌ಪೋರ್ಟ್ ಪ್ರಮೋಷನ್ ಕೌನ್ಸಿಲ್ ಸಂಸ್ಥೆಯು ಸುಪ್ರೀಂಕೋರ್ಟಿನಲ್ಲಿ ಹೈಕೋರ್ಟು ನೀಡಿರುವ ತೀರ್ಪನ್ನು ಪ್ರಶ್ನಿಸಿ ಮೊಕದ್ದಮೆ ಹೂಡಿತು. ವಿಚಾರಣಾ ಸಮಿತಿಯ ನಡವಳಿಕೆಗಳ ಕ್ರಮವನ್ನು ಔಚಿತ್ಯವನ್ನು ಮಾತ್ರ ಹೈಕೋರ್ಟು ಗಮನಿಸಬೇಕಿತ್ತೇ ಹೊರತು ಒಟ್ಟಾರೆ ಇಲಾಖೆ ತನಿಖೆಯ ಸಾಕ್ಷಿ, ಪುರಾವೆಗಳ ವೈಖರಿಯುತ್ತ ತೀರ್ಪು ಕೊಡಬೇಕಾದ ಅಗತ್ಯವಿರಲಿಲ್ಲವೆಂದು ಅಭಿಪ್ರಾಯ ಪಟ್ಟಿತು.

ಇನ್ನು ಮುಂದುವರಿದಂತೆ, ಎ.ಕೆ. ಚೋಪ್ರಾ ತನ್ನ ಮಹಿಳಾ ಉದ್ಯೋಗಿಯೊಡನೆ ದೈಹಿಕವಾಗಿ ಒತ್ತಾಯಮಾಡಿ ವರ್ತಿಸಿಲ್ಲದಿದ್ದರೂ ಅಂತಹ ಒಂದು ಪ್ರಯತ್ನ ಮಾಡಿದ್ದಾನೆಂಬುದೇ ಅವನ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ, ಎಂದು ಹೇಳಿದೆ. ಆರೋಪಿಯೊಂದಿಗೆ ಎ.ಕೆ. ಚೋಪ್ರಾ ವರ್ತಿಸಿರುವ ರೀತಿ 'ನೈತಿಕ ಒಪ್ಪಿಗೆ' ಗೆ ವಿರುದ್ಧವಾಗಿದ್ದು ಸಭ್ಯತೆ ಮತ್ತು ಸೌಜನ್ಯತೆ ಗೆ ಹೊರತಾಗಿದೆಯಲ್ಲದೆ, ಒಲ್ಲದನ್ನು ಲೈಂಗಿಕ ವರ್ತನೆಗಳಿಂದ ಕೂಡಿದೆ. ಎಂದು ಅಭಿಪ್ರಾಯ ಪಟ್ಟಿದೆ. ಈ ಸಂದರ್ಭದಲ್ಲಿ ಸುಪ್ರೀಂಕೋರ್ಟು ವಿಶಾಖ ಮೊಕದ್ದಮೆಯ ತೀರ್ಪಿನ ಅಂಶಗಳನ್ನು ಉಲ್ಲೇಖಿಸುತ್ತಾ 'ಲೈಂಗಿಕ ಕಿರುಕುಳವೆನ್ನುವುದು ಲೈಂಗಿಕ ತಾರತಮ್ಯದ ಮತ್ತೊಂದು ರೂಪ. ಒಲ್ಲದ ಲೈಂಗಿಕ ವರ್ತನೆಗಳಿಂದ, ಲೈಂಗಿಕ ಬೇಡಿಕೆಗಳನ್ನೊಡ್ಡುತ್ತಾ ಮಾತು ಮತ್ತು ಹಾವಭಾವಗಳಿಂದ ನೇರವಾಗಿ ಇಲ್ಲವೆ ಸಂಜ್ಞೆಯ ಮೂಲಕ ಲೈಂಗಿಕ ಅರ್ಥಗಳನ್ನು ಹೊಮ್ಮಿಸುತ್ತಾ ದುಡಿಯುವ ಸ್ಥಳದಲ್ಲಿ ಕೆಲಸಕ್ಕೆ ಅಡಚಣೆಯನ್ನುಂಟು ಮಾಡುವುದು ಲೈಂಗಿಕ ಕಿರುಕುಳವಾಗುತ್ತದೆ. ಇಂತಹ ವರ್ತನೆಗಳಿಗೆ ಮಣಿಯದ ಮಹಿಳೆಯರಿಗೆ ಕೆಲಸದ ಪರಿಸರವನ್ನು ಅಸಹನೀಯವಾಗಿ ಮಾಡುವುದು ಕೂಡ ಲೈಂಗಿಕ ಕಿರುಕುಳವಾಗುತ್ತದೆ.

ಈ ಪ್ರಕರಣದಲ್ಲಿ ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ, ಅಂತರರಾಷ್ಟ್ರೀಯ ಸಮಾವೇಶಗಳು ಕೈಗೊಂಡ ತೀರ್ಮಾನಗಳನ್ನು ನಮ್ಮ ದೇಶದೊಳಗೂ ಅನ್ವಯಿಸುವ ಮನೋಸಂಕಲ್ಪವನ್ನು ನಮ್ಮ ನ್ಯಾಯಲಯಗಳು ಮಾಡುತ್ತಿವೆ. ಅಷ್ಟೇ ಅಲ್ಲ ನಮ್ಮ ಸಂವಿಧಾನವು ಆಶ್ವಾಸನೆಯಿತ್ತಿರುವ ಲೈಂಗಿಕ ಸಮಾತೆಯು ಮೂಲಭೂತ ಹಕ್ಕಾಗಿ ಪ್ರತಿಯೊಬ್ಬ ಮಹಿಳೆಗೂ ದೊರೆಯಬೇಕೆಂಬ ಅಂಶದ ಕಡೆಗೂ ಒತ್ತು ಕೊಟ್ಟಂತಾಗಿದೆ. ಆದ್ದರಿಂದ ಲೈಂಗಿಕ ಕಿರುಕುಳವನ್ನು ತಡೆಯುವುದುರಲ್ಲಿ ಮತ್ತು ಮೂಲಭೂತ ಹಕ್ಕುಗಳ ಸಂರಕ್ಷಣೆಯಲ್ಲಿ ನ್ಯಾಯಾಲಯಗಳಿಗೆ ಜವಾಬ್ದಾರಿಯುತವಾದ ಪಾತ್ರವಿದೆ. 1979ರಲ್ಲಿ ನಡೆದ 'ಮಹಿಳೆಯರ ವಿರುದ್ಧದ ಎಲ್ಲ ರೀತಿಯ ತಾರತಮ್ಯ ನಿವಾರಣೆಯ ಸಮಾವೇಶ' ವು ಕೈಗೊಂಡ ನಿರ್ಣಯಗಳಿಗೆ ಮತ್ತು ಬೀಜಿಂಗ್‌ನಲ್ಲಿ ನಡೆದ ವಿಶ್ವಮಹಿಳಾ ಸಮಾವೇಶವು ಕೈಗೊಂಡ ನಿರ್ಣಯಗಳಿಗೆ ಭಾರತ ಸರ್ಕಾರವು ಬದ್ಧವಾಗಿದೆಯೆಂಬುದನ್ನು ಈ ನ್ಯಾಯಲಯದ ತೀರ್ಪುಗಳು ಮತ್ತೆ ಮತ್ತೆ ಸ್ಪಷ್ಟಪಡಿಸುತ್ತಿವೆ. ಈ ತೀರ್ಪನಲ್ಲಿ ಸುಪ್ರೀಂಕೋರ್ಟು ಆರ್ಥಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ಹಕ್ಕುಗಳನ್ನು ಕುರಿತು ನಡೆದ ಅಂತರರಾಷ್ಟ್ರೀಯ ಸಮಾವೇಶವು, ಪ್ರಸ್ತಾಪಿಸಿರುವ ದುಡಿಯುವ ಕ್ಷೇತ್ರದಲ್ಲಿ ಮಹಿಳೆಯರಿಗೆ ಯಾವುದೇ ರೀತಿಯ ಲೈಂಗಿಕ ಶೋಷಣೆಯ ಪರಿಸರವಿರಬಾರದು' ಎನ್ನುವ ಅಂಶವನ್ನೂ ಉಲ್ಲೇಖಿಸಿದೆ. ಈ ಎಲ್ಲ ಅಂತರರಾಷ್ಟ್ರೀಯ ಸಭೆ, ಸಮಾವೇಶಗಳ ನಿರ್ಣಯಗಳು ಈ ನೆಲದ ಕಾನೂನಿನ ಮೇಲೂ ಲೈಂಗಿಕ ನ್ಯಾಯ ದೊರಕಿಸುವ ನಿಟ್ಟಿನಲ್ಲಿ ಪ್ರಭಾವ ಬೀರಿವೆ.

ಈ ಎಲ್ಲ ತೀರ್ಪಿನ ನಂತರ ಎ.ಕೆ. ಚೋಪ್ರಾನ ವರ್ತನೆಯು ನೈತಿಕ ಒಪ್ಪಿಗೆ ವರ್ತನೆಗಳಿಗೆ ವಿರುದ್ಧವಾದದ್ದು, ಎಂದು ಮತ್ತೊಮ್ಮೆ ಪ್ರಸ್ತಾಪಿಸಿ ಆರೋಪಿಯ ವ್ಯಕ್ತಿತ್ವಕ್ಕೆ ಧಕ್ಕೆ ತರುವಂತಹುದಾಗಿದೆ. ಎಂದು ಅಭಿಪ್ರಾಯಪಟ್ಟಿದೆ. ಹೀಗೆ ಹೇಳುವುದರ ಮೂಲಕ ಲೈಂಗಿಕ ಪ್ರಕರಣಗಳನ್ನು ಅತ್ಯಂತ ಕಟ್ಟುನಿಟ್ಟಾಗಿ ಪರಿಶೀಲಿಸಬೇಕೆಂಬ ಅಂಶಕ್ಕೂ ಇಲ್ಲಿ ಒತ್ತು ಕೊಡಲಾಗಿದೆ. ಅಪರಾಧಿಗೆ ನೀಡಿದ ಶಿಕ್ಷೆ ಸ್ವಲ್ಪ ಕಠಿಣವಾದುದು ಎಂದು ಕೆಲವರು ಅಭಿಪ್ರಾಯ ಪಡಬಹುದಾದರೂ ಹೆಣ್ಣಿನ ಘನತೆ, ಗೌರವಕ್ಕೆ ಕುಂದುಂಟುಮಾಡುವ ಕೃತ್ಯಗಳಿಗೆ ದೊರೆತ ಶಿಕ್ಷೆ ಮುಂದಿನವರಿಗೆ ಎಚ್ಚರಿಕೆಯ ಗಂಟೆಯಾಬಗಲ್ಲುದು.

*- ಕೀರ್ತಿಸಿಂಗ್*

*ಕನ್ನಡಕ್ಕೆ - ಅಚಲ*

*ಕೃಪೆ : ವಿಮೆನ್ಸ್ ಈಕ್ವಾಲಿಟಿ*

# ಮಹಿಳೆ ಮತ್ತು ಆಧುನಿಕತ್ವದ ಪ್ರಶ್ನೆ : - ಒಂದು ಚಿಂತನೆ

- ಬಿ. ಎನ್. ಸುಮಿತ್ರಾಬಾಯಿ

ವೈಜ್ಞಾನಿಕತೆ, ವೈಚಾರಿಕತೆ ಹಾಗೂ ಮಾನಸಿಕವಾದ ಸ್ಥಿತ್ಯಂತರಗಳ ಫಲವಾಗಿ ತೀವ್ರವಾಗಿ ತುಯ್ದಾಟಕ್ಕೆ ಒಳಗಾದದ್ದು ಆಧುನಿಕ ಯುಗದ ಒಂದು ಮಾನವಲಕ್ಷಣವೆಂದು ಮನಶಾಸ್ತ್ರ ತತ್ವಜ್ಞರು ಸೂಚಿಸಿರುತ್ತಾರೆ. ಈ ವಿಚಾರದ ದೃಷ್ಟಿಯಿಂದ 'ಆಧುನಿಕ ಭಾರತೀಯ ಮಹಿಳೆ' ಯರು ಎಂದರೆ ಯಾರು ? ಅವರು ಬಹುತೇಕ ನಗರಗಳಲ್ಲಿ ನೆಲೆಸಿದ ಅಲ್ಪಸಂಖ್ಯಾತರು. ಗ್ರಾಮಗಳಲ್ಲಿರುವ ರೈತಾಪಿ ಮಹಿಳೆಯರು ಅಥವಾ ಇನ್ನೂ ಕೆಳಸ್ತರದ ನಿರಕ್ಷರತೆಯಲ್ಲೇ ಉಸಿರಾಡುತ್ತಿರುವ ಮಹಿಳೆಯರು ಈ ಕಾಲದಲ್ಲೇ ಜೀವಿಸುತ್ತಿರಬಹುದು. ಆದರೆ ಅವರ ಆಚಾರ, ವಿಚಾರ, ಬದುಕಿನ ಕ್ರಮಗಳು ಇನ್ನೂರು ವರ್ಷ ಹಿಂದಿದ್ದ ತಮ್ಮ ಪೂರ್ವಜರ ಸ್ಥಿತಿಗಿಂತ ಬೇರೆಯಲ್ಲದೆ ಇರಬಹುದು. ಅದೇ ರೀತಿ ನಗರಗಳಲ್ಲಿ ಜೀವಿಸುತ್ತಿದ್ದರೂ ಇವತ್ತಿನ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಅವುಗಳಲ್ಲಿ ಪಾಲ್ಗೊಳ್ಳುವವರು ತೀರಾ ಕಡಿಮೆ. ಆದ್ದರಿಂದಲೇ 'ಮಹಿಳಾ ಸಮಸ್ಯೆ' ಎನ್ನುವುದರ ನಿಜವಾದ ಅರ್ಥವು ಪ್ರಜ್ಞಾಪೂರ್ವಕವಾಗಿ ಅಲ್ಪಸಂಖ್ಯಾತ ಮಹಿಳೆಯರು ತಮ್ಮ ಒಳಹೊರಗಿನ ತಳಮಳಕ್ಕೆ ನೀಡುತ್ತಿರುವ ಒಂದು ವ್ಯಾಖ್ಯಾನವಾಗುತ್ತದೆ. ಹೆಚ್ಚೆಂದರೆ ಬಹುಸಂಖ್ಯಾತ ಮಹಿಳೆಯರ ಜಾಗೃತವಾಗಿರದ ಪ್ರಜ್ಞೆಯ ನೆಲೆಯಲ್ಲಿ ಅವರ ಬದುಕಿನ ಸ್ಥಿತಿಗತಿಗಳಲ್ಲಿ ಎದುರಾಗುತ್ತದೆ ಎಂದು ಇವರು ಕಲ್ಪಿಸುವ, ಚರ್ಚಿಸುವ, ಸಮಸ್ಯೆ 'ಮಹಿಳಾಸಮಸ್ಯೆ' ಅನ್ನಿಸಿಕೊಳ್ಳುತ್ತದೆ. ತಮ್ಮ ನಿಜಸ್ಥಿತಿಗಳ ಅರಿವು ಹೊಂದಿರುವ ತಮ್ಮ ಕಾಲದ ಸಂಕೀರ್ಣ ಅವಸ್ಥೆಗಳಿಗೆ, ಅನುಭವಗಳಿಗೆ ತೆರೆದುಕೊಳ್ಳಬಲ್ಲ, ಹಾಗೂ ವರ್ತಮಾನದ ಸಾಮಾಜಿಕ, ಆಧ್ಯಾತ್ಮಿಕ, ತುರ್ತುಗಳಿಗೆ ಬದುಕಿನಲ್ಲಿ ಅಭಿವ್ಯಕ್ತಿ ನೀಡುವ ಸಾಮರ್ಥ್ಯಪಡೆದಂಥ ಮಹಿಳೆಯರು 'ಆಧುನಿಕ' ರೆನ್ನಿಸಬಹುದು. ಸ್ಥಗಿತವಾದ, ಮಾನವೀಯ ಬೆಳವಣಿಗೆಗೆ ಪೂರಕವಲ್ಲದ, ಸುಪ್ತಪ್ರಜ್ಞೆಯಲ್ಲಿ ಬೇರು ಮತ್ತು ಪ್ರಗತಿಗೆ ಮಾರಕವಾದ ಅಂಶಗಳಿಂದ ಹೆಚ್ಚುಹೆಚ್ಚು ಬಿಡುಗಡೆ ಪಡೆದಂತೆಲ್ಲ, ಆಧುನಿಕತ್ವ ಹೆಚ್ಚು ಸ್ಫುಟವಾಗಬಲ್ಲದು.

ಒಂದು ನಿರ್ದಿಷ್ಟಯುಗದ ಸಾಂಸ್ಕೃತಿಕ ಲಕ್ಷಣಗಳನ್ನು ಪ್ರಖರವಾಗಿ ತೀವ್ರವಾಗಿ ಪ್ರಕಟಿಸುವಂಥವರು ಸಾಮಾನ್ಯವಾಗಿ ಅಲ್ಪಸಂಖ್ಯಾತರೇ ಆಗಿರುತ್ತಾರೆ. ಕಲ್ಯಾಣ ನಗರವನ್ನು ಕೇಂದ್ರವಾಗಿ ಮಾಡಿಕೊಂಡು ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ನಡೆಸಿದ ಮಹಾನ್ ಸಾಮಾಜಿಕ ಕ್ರಾಂತಿಯ ಹೊತ್ತಿನಲ್ಲಿ ಮಹಿಳೆಗೂ ಅಧ್ಯಾತ್ಮಿಕ ವಿಮುಕ್ತಿಯ ಬಾಗಿಲು ತೆರೆಯಿತು. ವಚನ ಕಟ್ಟುವ ಅಭಿವ್ಯಕ್ತಿಯ ಅವಕಾಶ ದೊರೆತಿತ್ತು. ಆದರೂ ಆ ಯುಗದ ಮಹಾ ಆಶಯಕ್ಕೆ ಅಂಥ ಬದಲಾವಣೆಯ ಪ್ರಕ್ರಿಯೆಗೆ ಸ್ಪಂದಿಸಿದವರು ಪಾಲ್ಗೊಂಡವರು ಎಷ್ಟು ಮಂದಿ? ಆ ಯುಗದ ಸ್ತ್ರೀಯರ ಸಾಧನೆಯ ಪ್ರತಿನಿಧಿಗಳೆಂದು ಇಂದು ಕಾಣುವುದು ಅತ್ಯಲ್ಪಸಂಖ್ಯೆಯ ಮಹಿಳೆಯರು ಮಾತ್ರ.

ಯಾವಾಗಲೂ ಯುಗವೊಂದರ ಮನೋಧರ್ಮದ ಪ್ರಧಾನಲಕ್ಷಣಗಳು ಕಾಣಿಸಿಕೊಳ್ಳುವುದಕ್ಕೆ ಬೇಕಾದಂಥ ನಾಗರಿಕತೆಯನ್ನು ಸಾಧ್ಯವಾಗಿಸಿದ ಬಹು ದೊಡ್ಡ ಜನ ಸಮೂಹದ ಅಗತ್ಯವಿರುತ್ತದೆ. ಇಂಥ ನಾಗರಿಕ ನೆಲೆಗಳಲ್ಲಿ ಹುಟ್ಟಿದ ಸಾಂಸ್ಕೃತಿಕ ಪರಿವರ್ತನೆಯ ವಿಚಾರದ ಅಲೆಗಳು ನಿಧಾನವಾಗಿ ಇತರ ಕಿರುವಲಯಗಳಿಗೆ ಬಿತ್ತರಗೊಳ್ಳುತ್ತದೆ. ಬೇರೆ ಬೇರೆ ಸಾಮಾಜಿಕ ಸ್ತರಗಳಿಂದ ಬಂದ ಶಿವಶರಣರ ಕ್ರಾಂತಿ ಘಟಿಸಿದ್ದು ಕಲ್ಯಾಣನಗರದಲ್ಲಿ, ಅವರ ವಿಚಾರದ ಪ್ರಖರ ಅಲೆಗಳು ವಚನಗಳ ಮೂಲಕ ಅತ್ಯಂತ ಸಾಮಾನ್ಯ ಜನರನ್ನೂ ತಲುಪಿದ್ದವು.

ಕ್ರೈಸ್ತಧರ್ಮದ ಸ್ಥಾಪನೆಯಾದಾಗ ಕೂಡ ಅದರ ನಿಜವಾದ ಸತ್ವವರಿತು ಭಾವಿಸಿದವರು ಕೆಲವೇ ಜನ. ನಂತರ ಅದು ವ್ಯಾಪಕವಾಗಿ ಹರಡಿತು. ಹೀಗೆಯೇ ಭಾರತದ ಸ್ವಾತಂತ್ರ್ಯದ ಹೋರಾಟ, ನಂತರದ ಸಂಪೂರ್ಣಕ್ರಾಂತಿಯ ಪ್ರೇರಣೆಗಳು ಕೆಲವೇ ಮಂದಿಯ

ನಾಗರಿಕ ಚಿಂತನೆಗಳಲ್ಲೇ ಮೊಳಕೆಯೊಡೆದವು. ಅಂದರೆ ಪ್ರಜ್ಞೆಯ ವಿಸ್ತರಣೆಗೆ ಒದಗಬಲ್ಲ ಶಿಕ್ಷಣ ಅರಿವು ಭೌತಿಕ ಪರಿಸರದ ಒತ್ತಡ, ಒತ್ತಾಸೆಗಳು ಯಾವುದೇ ಕ್ರಾಂತಿಗೂ ಅವಶ್ಯಕವೇ ಆಗಿರುತ್ತವೆ. ಅವರ ಪ್ರಯೋಗ ಫಲಿತವು ಸಿದ್ಧವಾಗುವುದು ಆ ಕ್ರಾಂತಿತತ್ವ ಇಡೀ ಸಮುದಾಯದ ಹಂಬಲವಾದಾಗ.

ಈ ವಾಸ್ತವವನ್ನು ಪೂರ್ವಗ್ರಹವಿಲ್ಲದೆ, ಅರ್ಥಮಾಡಿಕೊಂಡರೆ, ನಮ್ಮ ನಾಡಿನಲ್ಲಿ ಮಹಿಳಾ ಜಾಗೃತಿಯ ಪ್ರಕ್ರಿಯೆ, ಸ್ವಾತಂತ್ರ್ಯ ಪೂರ್ವದಲ್ಲಿರಲಿ, ಸ್ವಾತಂತ್ರ್ಯೋತ್ತರವಾದದ್ದಿರಲಿ, ಏಕೆ ನಗರಗಳಲ್ಲೇ ಕಾಣಿಸಿಕೊಳ್ಳಬೇಕಾಯಿತು ಎಂಬುದು ಸ್ವತಃ ಸ್ಪಷ್ಟವಾಗಬಲ್ಲದು. ಶಿಕ್ಷಣ, ಉದ್ಯೋಗ ಆರ್ಥಿಕಾದಿ ಸವಲತ್ತುಗಳನ್ನು ಪಡೆದವರೇ ಇಂಥ ಜಾಗೃತಿಯ ಪ್ರಕ್ರಿಯೆಗೆ ಮುಂಚೂಣಿಯಲ್ಲಿ ಏಕೆ ಇರುವುದಾಯಿತು ಎಂಬುದು ಇದರಿಂದ ಅರ್ಥವಾದೀತು. ಈ ಕಾರಣದಿಂದಲೇ ಕರ್ನಾಟಕದ ಆಧುನಿಕ ಮಹಿಳೆ ಎಂದು ಗುರುತಿಸಬಹುದಾದ ಮಹಿಳೆ ಕರ್ನಾಟಕದ ವರ್ತಮಾನದ ಸಾಮಾಜಿಕ, ಆಧ್ಯಾತ್ಮಿಕ ಅವಶ್ಯಕತೆಗೆ ಸ್ಪಂದಿಸಬಲ್ಲ ಹಾಗೂ ತನ್ನ ಜೀವನದಲ್ಲಿ ಅವುಗಳಿಗೆ ಅಭಿವ್ಯಕ್ತಿ ನೀಡಬಲ್ಲ ಮಹಿಳೆಯೇ ಆಗಿರುತ್ತಾಳೆ. ಈ ಹೊತ್ತಿನಲ್ಲೇ ಉಳಿದು ಬದುಕಿ ಪ್ರತಿಕ್ರಿಯಿಸುವುದೇ ಇಲ್ಲಿ ಆಧುನಿಕತ್ವ ಎಂಬುದರ ಅರ್ಥ.

ವರ್ತಮಾನದಲ್ಲಿ ಹುಟ್ಟಿದ್ದರೂ ಸಾಮಾಜಿಕ, ಆರ್ಥಿಕ, ಮಾನಸಿಕಾದಿ ಸಾಂಸ್ಕೃತಿಕ ಸಂಕೋಲೆಗಳಲ್ಲಿ ಬಂಧಿತರಾಗಿರುವ ಮಹಿಳೆಯರು ನಗರದಲ್ಲಿರಲಿ ಹಳ್ಳಿಗಳಲ್ಲಿರಲಿ ಯಾವುದೇ ಜಾತಿವರ್ಗಗಳಿಗೆ ಸೇರಿದವರಿರಲಿ, ಅವರನ್ನು ಆಧುನಿಕತೆಯ ಪ್ರತಿನಿಧಿಗಳೆಂದು ಹೇಳಲಾಗುವುದಿಲ್ಲ. ಹೊರಗಿನ ವೇಷ, ಭೂಷಣ, ಅಲಂಕಾರ, ಬದುಕಿನ ವಿಧಾನಗಳಲ್ಲಿ ಆಧುನಿಕತೆ ತೋರುವುದಷ್ಟೇ ಆಧುನಿಕ ಮಹಿಳೆಯ ಲಕ್ಷಣವಾಗದು. ಆಂತರಿಕ ವ್ಯಕ್ತಿತ್ವದಲ್ಲಿಯೂ ಆಧುನಿಕರೆನಿಸಿದ ಪಶ್ಚಿಮದ ವಿಚಾರಧಾರೆಯಾಗಿ ಸ್ತ್ರೀವಾದವು ಕರ್ನಾಟಕದ ಮಹಿಳೆಯರ ವಿಚಾರಗಳನ್ನು ಪ್ರಭಾವಿಸಲು ಆರಂಭಿಸಿದಾಗ ಸ್ಥಳೀಯ ನೆಲೆಗಳಿಂದ ಹುಟ್ಟಿರುವ ಕೆಲವು ಪ್ರತಿಕ್ರಿಯೆಗಳು, ವಿಶೇಷವಾಗಿ, ಕೆಳಸ್ತರದ ಹಿನ್ನೆಲೆಯಿರುವ ಆದರೆ ಶಿಕ್ಷಣ, ಉದ್ಯೋಗಗಳ ಮೂಲಕ ನಗರಗಳಲ್ಲಿ ಮಧ್ಯಮವರ್ಗಕ್ಕೆ ಸೇರಿದ ಜನತೆಯಿಂದ ಹುಟ್ಟಿರುವ ಪ್ರತಿಕ್ರಿಯೆಗಳು ನಿಜವಾಗಿ ಚಿಂತನೆಗೆ ಅರ್ಹವಾಗಿವೆ. ಈ ಪ್ರಶ್ನೆಯನ್ನು ಪರೀಕ್ಷಿಸುವ ಮುಂಚೆ, ಇಲ್ಲಿನ ಇನ್ನೊಂದು ಸಾಂಸ್ಕೃತಿಕ ಅಂಶವನ್ನು ಮನಸ್ಸಿಗೆ ತಂದುಕೊಳ್ಳಬೇಕು.

ಸಾಂಸ್ಕೃತಿಕ ವೈಶಿಷ್ಟ್ಯವನ್ನು ಬಹು ಹಿಂದೆಯೇ ಕುವೆಂಪು ಅವರು ಕಂಡಿದ್ದರು. ಕಮ್ಯುನಿಸಂ ಇಲ್ಲಿಗೆ ಬಂದರೂ ಅದಕ್ಕೆ ಈ ನೆಲದಲ್ಲಿ ಶಿವದಾರ ಜನಿವಾರ ನಾಮ ವಿಭೂತಿಗಳು ಸೇರಿಕೊಳ್ಳುತ್ತವೆ ಎಂಬ ಧ್ವನಿಯನ್ನವರು ಸೂಚಿಸಿದ್ದರು. ಈ ವಿಚಾರವು ಇಂದು ಇನ್ನೂ ವ್ಯಾಪ್ತಿಪಡೆದಿದೆ. ಅಂದರೆ ಯಾವುದೇ ಹೊಸ ಸಂಗತಿ ಇಲ್ಲಿ ಜರುಗಿದರೂ ಅದು ವೈಯಕ್ತಿಕವೋ, ಸಾಮಾಜಿಕವೋ ಎಂದೂ ನೋಡದೆ, ಅದಕ್ಕೆ ಜಾತಿ, ವರ್ಗ ಲಿಂಗಗಳ ಬಣ್ಣವನ್ನೂ ಬಳಿದು ನಂತರ ನೋಡಲಾಗುತ್ತದೆ.

ಯಾವುದೇ ಹೊಸಚಿಂತನೆಯೊಂದು ತಮ್ಮಲ್ಲಿಗೆ ಕಾಲಿಟ್ಟಾಗಲೂ ಪ್ರಜ್ಞಾವಂತ ಜನತೆಯು ಅದನ್ನು ವಸ್ತುನಿಷ್ಠವಾಗಿ ಅಧ್ಯಯನಮಾಡಿ, ಅದರ ಪ್ರಸ್ತುತತೆಯನ್ನು ಚರ್ಚಿಸಬೇಕು. ಆದರೆ ನಮ್ಮ ನಾಡಿನಲ್ಲಿ ಈ ಬಗೆಯ ವೈಚಾರಿಕ ಚರ್ಚೆಗಿಂತ ಹೆಚ್ಚಾಗಿ ಆ ತಾತ್ವಿಕತೆಯನ್ನು ಬರಮಾಡಿದವರ ಜಾತಿ, ವರ್ಗ, ಲಿಂಗಗಳು, ಆ ಬರಮಾಡುವಿಕೆಯಲ್ಲಿ ಹೇಗೆ ಕೆಲಸ ಮಾಡಿರಬಹುದು ಎಂಬಂಥ ಕೆಳಸ್ತರದ ಕುತೂಹಲದ ಕೆಣಕಾಟಗಳೇ ತಾತ್ವಿಕ ಚರ್ಚೆಗಳೋ ಎಂಬಂತೆ ಪ್ರತಿಪಾದಿತವಾಗುವುದೂ ಉಂಟು. 'ಸ್ತ್ರೀವಾದ' ಎಂಬ ವಿದೇಶೀ ಮೂಲದ ತಾತ್ವಿಕ ಚಿಂತನೆಯ ವಿಷಯವನ್ನೇ ಇಲ್ಲಿ ಉದಾಹರಣೆಗಾಗಿ ನೋಡಬಹುದು.

ಎಂಭತ್ತರ ದಶಕದಲ್ಲಿ ಸ್ತ್ರೀವಾದಿ ಚಿಂತನೆಗಳು ಕನ್ನಡದ ನೆಲಕ್ಕೆ ಕಾಲಿಡತೊಡಗಿದಾಗ, ಅದನ್ನು ನಮ್ಮ ಸಂಸ್ಕೃತಿಯ ಪ್ರಧಾನಸ್ತರದಲ್ಲಿರುವ ಪಿತೃಪ್ರಧಾನ ವ್ಯವಸ್ಥೆಯ ವಿಮರ್ಶೆಗೆ ಉಪಯುಕ್ತವೆಂದು ಕಂಡುಕೊಂಡ ಒಂದು ಪೀಳಿಗೆಯ ಚಿಂತಕಿಯರು ಆ ತಾತ್ವಿಕತೆಯನ್ನು ಅನುವಾದಿಸಿ ಪರಿಚಯಿಸಲು, ಮಹಿಳಾಸಾಹಿತ್ಯದ ಅಧ್ಯಯನಕ್ಕೆ ಅನ್ವಯಿಸಲು, ಮಹಿಳಾ ಪರಂಪರೆಯನ್ನು ಕುರಿತು ಶೋಧಿಸಲು ಬಳಸಿಕೊಳ್ಳತೊಡಗಿದರು. ಆ ಕಾಲಕ್ಕೆ ಇಂಥ ಪ್ರಯತ್ನಗಳು ಬೌದ್ಧಿಕವಲಯಗಳಿಗಾಲಿ, ಸಾಮಾನ್ಯ ಓದುಗರಿಗಾಲಿ ಆಕರ್ಷಣೆಯ ವಿಷಯಗಳೇನೂ ಆಗಿರಲಿಲ್ಲ. ಯಾರಲ್ಲಿ ನಿಜವಾಗಿ ಸಾಂಸ್ಕೃತಿಕ ಹಾಗೂ ಸಾಮಾಜಿಕ

ಬದಲಾವಣೆಯು ಕಳಕಳಿಯಿತ್ತೋ ಅಂಥ. ಕೆಲವೇ ಮಹಿಳೆಯರು, ಪದವಿ, ಭಡ್ತಿ, ಪ್ರಶಸ್ತಿ ಅಥವಾ ವಿದೇಶೀ ಪ್ರವಾಸದಂಥ ಹಿತಾಸಕ್ತಿಗಳೇನೂ ಇರದಂಥ ಕೇವಲ ಬೌದ್ಧಿಕ ಕುತೂಹಲದ ನಿಸ್ಪೃಹತೆಯಲ್ಲಿ ಇಂಥ ಹುಡುಕಾಟಗಳಿಗೆ ತಮ್ಮ ಶ್ರಮವನ್ನೂ ಹಣವನ್ನೂ ಕಾಲವನ್ನೂ ತೊಡಗಿಸಿದರು.

ಆದರೆ ಇಪ್ಪತ್ತು ವರ್ಷಗಳೊಳಗೆ ಈ ತಳಪಾಯರೂಪಣದ ಮೇಲೆ ಸ್ತ್ರೀವಾದಿ ಚರ್ಚೆ, ಗ್ರಂಥ ರಚನೆ, ವಿಚಾರ ಸಂಕಿರಣ ಮುಂತಾದ ವಿದ್ವಾಂಸರ ಆ ಸಕ್ತಿಗಳು ಬೆಳೆದವು. ಸಂಸ್ಕೃತಿ ವಿಮರ್ಶೆಯು ಹೊಸ ವಿಧಾನವಾಗಿ ಸ್ತ್ರೀವಾದ ಕೂಡ ಒಂದು ಚರ್ಚಾವೇದಿಕೆಯಾಯಿತು. ವಿವಿಧ ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳೂ, ಪೀಠಗಳೂ ಪದವಿಗಳೂ ಹುಟ್ಟಿಕೊಂಡವು. ಶೈಕ್ಷಣಿಕ ಪದವಿ, ಉದ್ಯೋಗ ಭಡ್ತಿಗಳಂಥ ಸ್ವಂತದ ಹಿತಾಸಕ್ತಿಗೂ ಒದಗುವ ಒಂದು ಅರ್ಹತೆಯಾಗಿ ಇಂದು ಸ್ತ್ರೀವಾದಿ ಅಧ್ಯಯನ, ಮಹಿಳಾ ಅಧ್ಯಯನಗಳು ಬೆಳೆಯುತ್ತಿವೆ. ಕನ್ನಡ ಸಾಹಿತ್ಯದ ಸ್ತ್ರೀವಾದಿ ವಿಮರ್ಶೆ ಕೂಡ ಸಾಹಿತ್ಯ ಪೀಠಗಳ ಸಂಘಸಂಸ್ಥೆಗಳ ಕಾರ್ಯ ಚಟುವಟಿಕೆಗಳಿಗೆ ಚಾಲನೆ ಕೊಟ್ಟಿದೆ. ಅಂತರ ರಾಷ್ಟ್ರೀಯವಾಗಿ ತಮ್ಮ ಪ್ರತಿಭೆ ಮೆರೆಸಬಯಸುವವರಿಗೂ ಒದಗುವಂಥ ಒಂದು ಉಪಕರಣದ ಯೋಗ್ಯತೆ ಅದಕ್ಕೆ ಲಭಿಸಿದೆ. ಈ ಬೆಳವಣಿಗೆಗಳಿಂದಾಗಿ ತೊಂಭತ್ತರ ದಶಕದಲ್ಲಿ ಹೊಸದಾಗಿ ಈ ಕ್ಷೇತ್ರಕ್ಕೆ ಕಾಲಿಡುವವರಿಗೆ ವ್ಯಕ್ತಿಗತವಾದ ಅಥವಾ ಸಾಂಸ್ಥಿಕವಾದ ಹಿತಾಸಕ್ತಿಗಳೂ ಒಂದು ಆಕರ್ಷಣೆಯಾಗುವುದು ಸಾಧ್ಯ. ಹೀಗೆ ಕಣ್ಣತುಂಬ ಖಾಸಗಿ ಹಿತಾಸಕ್ತಿಯ ಕನಸುಗಳು ಕುಣಿಯ ತೊಡಗಿದವರಿಗೆ ಆರಂಭಕಾಲದ ಯತ್ನದ ಹಿಂದಿದ್ದದ್ದು ಬಹುಮಟ್ಟಿಗೆ ವ್ಯಕಿಕ್ತನಿರಪೇಕ್ಷವೆನ್ನಬಹುದಾದ ಸಾಮಾಜಿಕ, ಬೌದ್ಧಿಕ, ಆಸಕ್ತಿಗಳು ಎಂಬುದು ಕಾಣದೆಯೂ ಹೋಗಬಹುದು. ಈ ರೀತಿ ವೈಚಾರಿಕತೆ ಮಸುಕಾದಾಗ ಬೇರೆ ಬೇರೆ ತಾರ್ಕಿಕ ವಾದಗಳೂ ಮೇಲೆಳಬಹುದು. ಅಂಥ ಕೆಲವು ವಾದಗಳು ಪಾಕ್ಷಿಕ ಸತ್ಯವನ್ನೂ ಒಳಗೊಂಡಿದ್ದಾಗ, ವಿಚಾರಕ್ಷೇತ್ರದ ನವದೀಕ್ಷಿತ ವರ್ಗದಲ್ಲಿ ತೀವ್ರಗೊಂದಲವನ್ನೂ ಹುಟ್ಟುಹಾಕಬಲ್ಲವು.

ಉದಾಹರಣೆಗೆ, ಜಾನಪದ ಸಾಮಾಗ್ರಿಯೇ ಸಂಸ್ಕೃತಿ ಶೋಧನೆಯ ಮಹತ್ವದ ಆಕರವೆಂದು ನಂಬುವುದು ಇಂದಿನವರೆಗಿನ ಸ್ತ್ರೀವಾದವೆಲ್ಲ ಕೇವಲ ಅಕ್ಷರ ಪರಂಪರೆಗೆ ಸೇರಿದ ಶಿಷ್ಟಸಂಸ್ಕೃತಿಗೆಷ್ಟೇ ಸೀಮಿತವಾಗಿದೆ ಎಂದು ಆಕ್ಷೇಪಿಸಬಹುದು. ವಸಾಹತು ಶಾಹಿ ವಿರೋಧಿಗಳು, ದೇಶೀವಾದಿಗಳು ಸ್ತ್ರೀವಾದಿಗಳು ಪರಸಂಸ್ಕೃತಿಯಲ್ಲಿ ಉತ್ಪನ್ನವಾದ ತತ್ವಗಳನ್ನು ಕಡತಂದು ನಾಡಿನ ನೆಲದಲ್ಲಿ ಕಸಿಮಾಡಲು ಹೊರಟಿದ್ದಾರೆಂದೂ, ಇವರದೆಲ್ಲ ನಿಜವಾದ ಸ್ಥಳೀಯ ಸಂಸ್ಕೃತಿಯ ಜೀವದ ಅರಿವಿಲ್ಲದ ಮಸ್ತಿಷ್ಕ ಕೇಂದ್ರಿತ ತಡಕಾಟಗಳೆಂದೂ ಕೂಗೆಬ್ಬಿಸುವುದುಂಟು. ಇದೇ ರೀತಿಯಲ್ಲಿ ಕೆಳಸ್ತರದ ಸಂಸ್ಕೃತಿಯ ನಿಟ್ಟಿನಿಂದ ಮೇಲು ಸಂಸ್ಕೃತಿಗ ಅಧ್ಯಯನ ಮಾಡುವುದೇ ಇಂದು ಹೆಚ್ಚು ಪ್ರಸ್ತುತವೆಂದಕೊಂಡವರು ಮಹಿಳಾ ಅಧ್ಯಯನದ ಇದುವರೆಗಿನ ಮಾದರಿಗಳೆಲ್ಲ ಮೇಲ್ಜಾತಿಯವರ ಬಗ್ಗೆ ನಡೆದಿರುವ ಯತ್ನಗಳೆಂದು, ಇದರಲ್ಲಿ ಬ್ರಾಹ್ಮಣಿಕೆಯ ಹುನ್ನಾರವಿದೆಯೆಂದೂ ಸಾರಲೂ ಹೊರಡಬಹುದು. ಆದರೆ ಈ ವಿವಿಧ ನಿಟ್ಟಿನ ತರ್ಕ ವಿತರ್ಕಗಳು ಹೊಸದಾಗಿ ಶಿಕ್ಷಣ, ಉದ್ಯೋಗದ ಅವಕಾಶಗಳಿಂದ ನಗರದ ಮಧ್ಯಮವರ್ಗದಲ್ಲಿ ತನ್ನನ್ನು ಗುರುತಿಸಿಕೊಳ್ಳುವ ಕೆಳಸ್ತರದ ಲೇಖಕಿಯರ ಅಥವಾ ಸಂಶೋಧಕರಲ್ಲಿ ಹೇಗೆ ಗೊಂದಲವನ್ನೂ ಹುಟ್ಟಿಸಬಲ್ಲವು ಎಂಬುದು ನಿಜಕ್ಕೂ ವಿಚಾರ ಮಾಡಬೇಕಾದ ಸಂಗತಿ.

ಈ ಶತಮಾನದ ಆರಂಭದ ಲೇಖಕಿಯರೆಲ್ಲ ಬ್ರಾಹ್ಮಣರಾಗಿದ್ದದ್ದು, ಅಥವಾ ಇವತ್ತಿನ ಸ್ತ್ರೀವಾದಿ ಚಳುವಳಿಯ ಮುಂಚೂಣಿಯಲ್ಲಿ ನಗರದ ಶಿಕ್ಷಿತ ಮಧ್ಯಮ ವರ್ಗದ ಮಹಿಳೆಯರು ಕಾಣಿಸಿಕೊಂಡದ್ದು ಒಂದು ರೀತಿಯ ಚಾರಿತ್ರಿಕ ಅನಿವಾರ್ಯ ಎಂಬಂಥ ವಿಶಾಲವಾದ ತಿಳಿವಳಿಕೆ ದೊರೆಯದಿದ್ದಾಗ ಇಂದಿನ ಮಹಿಳಾ ಅಧ್ಯಯನಕಾರರು ತಮ್ಮದೇ ಆದ ವಿಚಾರದ ನೆಲೆಗಿಂತಲೂ, ಪರಿಸರದಲ್ಲಿ ಚಾಲ್ತಿಯಲ್ಲಿರುವ ಜನಪ್ರಿಯವೂ, ಸಾಂಪ್ರದಾಯಿಕವೂ ಆದ ಪ್ರತಿಕ್ರಿಯೆಗಳನ್ನೇ ತಾವೂ ತೋರುವುದರಲ್ಲೇ ತಮ್ಮ ಜಾಣತನವಿದೆ ಎಂದು ಭ್ರಮಿಸಬಹುದು ಆದ್ದರಿಂದ ಬ್ರಾಹ್ಮಣಿಕೆ, ಪುರೋಹಿತಶಾಹಿಯ ಅಧಿಕಾರ ಮೊದಲಾದ ಸವಕಲಾದರೂ ಬಲುಬೇಗ ಸಮುದಾಯವನ್ನು ಸೆಳೆಯಬಹುದಾದ ಪರಿಭಾಷೆಯನ್ನು ಆರಿಸಿಕೊಳ್ಳುವಲ್ಲೇ ತಮ್ಮ ಹಿತಾಸಕ್ತಿಯಿದೆಯೆಂದೂ ಗುರುತಿಸಿಕೊಳ್ಳಬಹುದು. ಆದರೆ ತಮ್ಮ ಈ ಪ್ರತಿಕ್ರಿಯೆಯ ನಿಜವಾದ ಮೂಲ ತಾವು ಎದುರಿಸುತ್ತಿರುವ ಸಾಂಸ್ಕೃತಿಕ ಸ್ಥಿತ್ಯಂತರದಲ್ಲಿ

ಇರಬಹುದು ಎಂಬುದು ಅಂಥವರಿಗೆ ಅರಿವಿರುವುದಿಲ್ಲ.

ಮೂಲತಃ ಕೆಳಸಾಂಸ್ಕೃತಿಕ ಸ್ತರಕ್ಕೆ ಸೇರಿದ್ದು, ಇಂದಿನ ಜನತಾಂತ್ರಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಶಿಕ್ಷಣ, ಉದ್ಯೋಗಗಳ ಮೂಲಕವಾಗಿ ನಗರದಲ್ಲಿ ನೆಲೆಸುವ, ನವೀನವಾಗಿ ಮಾಧ್ಯಮವರ್ಗದ ಅನುಭವಕ್ಕೆ ತೆರೆದುಕೊಳ್ಳುವ ಜನರಿಗೆಲ್ಲರಿಗೂ ಇಂಥ ಸಮಸ್ಯೆ ಎದುರಾಗಲು ಸಾಧ್ಯ. ತಮ್ಮ ಬದಲಾದ, ಬೆಳೆದ ವಿಚಾರ ಪ್ರಜ್ಞೆಯಿಂದಾಗಿ ಇವರು ತಮ್ಮ ಮೂಲದ ಬಹುಸಂಖ್ಯಾತ ಕೆಳಸ್ತರದ ನಿರಕ್ಷರಸ್ತ ಸಮುದಾಯದಿಂದ ಪ್ರತ್ಯೇಕತೆಯನ್ನು ಅನುಭವಿಸುತ್ತಿರುತ್ತಾರೆ. ಈ ವೈಚಾರಿಕ ಪ್ರಜ್ಞೆ ಮತ್ತು ಹಿಂದಿನಿಂದ ಪರಕೀಯಗೊಂಡ ಸ್ಥಿತಿಯಿಂದ, ತಮ್ಮ ಪ್ರಗತಿಯ ಮುಂದಿನ ಮೆಟ್ಟಿಲುಗಳಿಗಾಗಿ ಇವರು ಈಗಾಗಲೇ ಆಧುನಿಕವೆಂದು ಒಪ್ಪಿತವಾದ ಬದುಕಿನ ಮಾದರಿಗಳತ್ತ ನೋಡುರಿವುದು ಅನಿವಾರ್ಯವಾಗುತ್ತದೆ. ಆದರೆ ಕೆಳಸ್ತರದ ಮೂಲದಿಂದ ಹುಟ್ಟಿದ್ದಂಥ ಸಾಂಪ್ರದಾಯಿಕ ಉದಾಹರಣೆಗೆ ಪ್ರಜ್ಞೆಯ ಸ್ತರದಲ್ಲಿ ಜಾತಿವಿನಾಶದ ತಾತ್ವಿಕತೆ, ಸುಪ್ತಪ್ರಜ್ಞೆಯಲ್ಲಿ ಮೇಲುಸಂಸ್ಕೃತಿ ಕುರಿತಂಥ ಭೀತಿ - ಎರಡೂ ಒಟ್ಟಿಗೇ ಕೆಲಸ ಮಾಡುತ್ತಿರಬಹುದು. ತಾನು ಪಡೆದ ಕಲಿಕೆ, ತನ್ನ ಹೊಸ ಆರ್ಥಿಕ ಸ್ಥಾನಗಳು ಸಾಮಾಜಿಕವಾಗಿ ತನ್ನನ್ನು ಕೆಳನೆಲೆಯಿಂದ ಮೇಲಕ್ಕೆ ತಂದಿದ್ದರೂ, ಒಳಗಿನ ಅಪ್ರಜ್ಞಾಪೂರ್ವಕ, ಸಾಂಪ್ರದಾಯಿಕ ಭೀತಿಭಾವಗಳು ವಿಚಾರವನ್ನು ನಿಯಂತ್ರಿಸುವುದು ಸಾಧ್ಯ. ಹೀಗಾದಾಗ ಮೇಲ್ಜಾತಿಗಳ ಬಗೆಗಿನ ತಾತ್ವಿಕ ಅಂಜಿಕೆಯೇ ವಿಚಾರದ ಆಕೃತಿಯನ್ನೂ ತಳೆದು 'ಸ್ತ್ರೀವಾದಿಗಳು' ಈವರೆಗೆ ಮಾಡಿರುವುದೆಲ್ಲ ಬ್ರಾಹ್ಮಣ ಲೇಖಕಿಯರು. ಬ್ರಾಹ್ಮಣ ಲೇಖಕಿಯರ ಬಗ್ಗೆ ಮಾಡಿಕೊಂಡ ವಿಮರ್ಶೆ ಎಂಬಂಥ ವಾದದ ರೂಪತಳೆದು ಅಭಿವ್ಯಕ್ತಿ ಪಡೆದರೆ ಆಶ್ಚರ್ಯ ಪಡಬೇಕಾಗಿಲ್ಲ.

ಆದರೆ, ತನ್ನಕಲಿಕೆ, ಪ್ರಜ್ಞಾಜಾಗೃತಿ, ವೈಚಾರಿಕ ನೆಲೆಗಳಾಚೆ ತಂದುಕೊಟ್ಟ ಈ ಹೊಸ ಅನುಭವಗಳೊಳಗೆ ಆ ವ್ಯಕ್ತಿ ಹೆಚ್ಚು ಹೆಚ್ಚಾಗಿ ಪಳಗಿದಂತೆ, ಒಳಮನದ ಅಂಜಿಕೆಯ ಭೂತಗಳು ವಾಸ್ತವದಲ್ಲಿ ಹೇಗೆ ಅರ್ಥಹೀನ ಎಂಬುದು ಅರಿವಿಗೆ ಬರಲು ಸಾಧ್ಯ. ಹೊಸತಿಗೆ ತನ್ನನ್ನು ತೆರೆದುಕೊಳ್ಳುವ ಈ ಪ್ರಕ್ರಿಯೆಯಲ್ಲಿ ಕೆಳಗಿನಿಂದ ಪಡೆದ ಅನುಭವಗಳನ್ನು ಪ್ರಜ್ಞೆಯೊಳಕ್ಕೆ ತಂದುಕೊಳ್ಳುವ ವ್ಯಕ್ತಿತ್ವ ವಿಕಸನದ ಕ್ರಿಯೆ ಕೂಡ ಸೇರಿರುತ್ತದೆ. ಮಹಿಳೆಯರೆಲ್ಲರೂ ಆಧುನಿಕತ್ವದೊಂದಗೆ ಬದುಕಬಹುದಾದ ಸಾಧ್ಯತೆ ಇಂತಹ ವ್ಯಕ್ತಿತ್ವ ವಿಕಾಸದ ಮೂಲಕವೇ ಸೃಷ್ಟಿಯಾಗಬಲ್ಲದು. ಆದರೆ ಇದು ದಿಢೀರನೆ ರಾತ್ರೋರಾತ್ರಿ ಆಗಿ ಬಿಡುವ ಪರಿವರ್ತನೆಯಲ್ಲ. ಅದಕ್ಕೆ ಕಾಲಬೇಕು. ಕಾಯಲೂ ಬೇಕು.

ಈ ಕಾರಣದಿಂದಲೇ ಬೆರಳಣಿಕೆಯಷ್ಟು ಮಹಿಳೆಯರಿಂದ ಯಾವುದೇ ರೀತಿ ಬಹುಸಂಖ್ಯಾತ ಕೆಳಸ್ತರದ ದುರವಸ್ಥೆಯಲ್ಲಿರುವ ಮಹಿಳೆಯರಿಗೆ ಏನೂ ಉಪಕಾರವಾಗುವುದಿಲ್ಲ ಎಂಬಂಥ ಹೇಳಿಕೆಗಳು ವಿಚಾರ ಮಾಡಲು ಬಯಸದವರ ಹೇಳಿಕೆಗಳಷ್ಟೇ ಆಗಿರುತ್ತವೆ. ಆದ್ದರಿಂದ ಕಲಿತು, ವರ್ಣಾಂತರದ ಸ್ಥಿತ್ಯಂತರಕ್ಕೆ ಒಳಗಾಗುವ ಯಾವುದೇ ಮಹಿಳೆ, ಸಮಾಜ ತನಗೆ ಯಾವುದೇ ಹಣೆಪಟ್ಟಿ ಹಚ್ಚಿರಲಿ, ಮಹಿಳೆಯಾಗಿ ಆಕೆ ಕೇಳಿಕೊಳ್ಳಬೇಕಾದ ಪ್ರಶ್ನೆ ಈ ಹಣೆಪಟ್ಟಿಯಲ್ಲಿ ನನ್ನನ್ನು ಬಂಧಿಸಿ, ಉಳಿಸಿಡಲು ಯತ್ನಿಸುತ್ತಿರುವವರು ಯಾರು ? ಎಂಬುದೇ ಆಗಿರುತ್ತದೆ. ತನ್ನೊಳಗಿನ ಸಶಕ್ತವೂ ಮಾನವೀಯವೂ ಆದ ನೆಲೆಗಳನ್ನು ತನ್ನ ಪ್ರಜ್ಞಾಸ್ತರಕ್ಕೆ ತಂದುಕೊಳ್ಳಲು ಇಂಥ ಹೊರಗಿನ ಅಂಕಿತಗಳು ಹೇಗೆ ಅಡ್ಡಿಮಾಡುತ್ತವೆಂದು ಆಕೆ ಕೇಳಿಕೊಳ್ಳಬೇಕು. ಜಾತಿವಿನಾಶದ ಪ್ರಕ್ರಿಯೆ ಮೊದಲು ಮೊಳೆಯಬೇಕಾದ್ದು ಹೀಗೆ ತನ್ನ ಅಂಕಿತದ ಬಿಗಿತದಿಂದ ಪಾರಾಗುವ ಆತ್ಮವಿಮರ್ಶೆಯ ಪ್ರಕ್ರಿಯೆಯಲ್ಲಿ. ಆ ಕಾರಣಕ್ಕಾಗಿಯೇ ವ್ಯಕ್ತಿತ್ವ ವಿಕಾಸದಲ್ಲಿ ತನ್ನ ಆಧುನಿಕತ್ವದ ಗುಟ್ಟು ಅಡಗಿರುತ್ತದೆ. ಎಂಬುದನ್ನು ತಿಳಿದು, ಆ ಸ್ಥಿತಿಗಾಗಿ ಹಂಬಲಿಸುವ ಯಾರೇ ಆಗಲಿ ಮಹಿಳಾ ಚಳವಳಿಯಲ್ಲಿ ತಮ್ಮದೇ ಆದ ಪಾತ್ರವನ್ನು ನಿರ್ವಹಿಸುತ್ತಿರುತ್ತಾರೆ. ಮತ್ತು ಇಂಥ ವಿಕಸಿತ ಪ್ರಜ್ಞೆಯ ಹಂಬಲ ಮಹಿಳೆಯರಲ್ಲಿ ಹೆಚ್ಚು ಹೆಚ್ಚು ತೀವ್ರವಾಗಿ ಹರಡಿದಾಗ ನಿಜವಾದ ಆಧುನಿಕ ಮಹಿಳೆಯರ ಸಂಖ್ಯೆ ಹೆಚ್ಚಲು ಸಾಧ್ಯ.

## ಗಮನಿಸಿ

**'ಅಚಲ' ವಿಳಾಸ**

**108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ, ಬನಶಂಕರಿ 3ನೇ ಹಂತ, ಬೆಂಗಳೂರು - 560 085**

# ಸಿಂಗಪುರದಲ್ಲಿ ಮಹಿಳೆಯರ ಒತ್ತಡಗಳು

ಅಡಿಗೆ ಮನೆಯ ಒತ್ತಡಗಳಿಂದ ಬಿಡುಗಡೆ, ಆರ್ಥಿಕ ಸ್ವಾತಂತ್ರ್ಯ, ಮತ್ತು ಸಮಾನತೆ, ಇವು ಇಂದಿಗೂ ಭಾರತದ ನಾರಿಯರಿಗೆ ಗಗನ ಕುಸುಮನಾಗಿಯೇ, ಉಳಿದಿದೆ. ಇವೆಲ್ಲವೂ ಸಿಕ್ಕಾಗ ಮಹಿಳೆಯ ಶೋಷಿತ ಪರಿಸ್ಥಿತಿ ಒಂದಿಷ್ಟು ಸುಧಾರಿಸಬಹುದೆಂದು ನಾವು ಕನಸು ಕಾಣುತ್ತೇವೆ. ಆದರೆ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಈ ಮೇಲಿನ ಎಲ್ಲವೂ ಲಭಿಸಿಯೂ ಹೆಣ್ಣಿನ ಮೇಲಿನ ದಬ್ಬಾಳಿಕೆ ನಿರಂತರವಾಗಿ ನಡೆಯುವುದು ಸಾಧ್ಯವಿದೆ. ಅದಕ್ಕೆ ಸಿಂಗಪುರದ ಮಹಿಳೆಯರೇ ಸಾಕ್ಷಿ. ಸಿಂಗಪುರದಲ್ಲಿ ಮೂರು ಸಂಸ್ಕೃತಿಗಳು ಮುಪ್ಪುರಿಗೊಂಡಿವೆ. ಚೀನೀಯರು, ಮಲೈಗಳು ಮತ್ತು ತಮಿಳು ಭಾರತೀಯರು. ಕುತೂಹಲದ ವಿಷಯವೆಂದರೆ ಮೂರು ಸಂಸ್ಕೃತಿಗಳಲ್ಲೂ ಮಹಿಳೆಯರ ವಿಚಾರದಲ್ಲಿ ಅನೇಕ ಸಮಾನತೆಗಳಿವೆ. ಈ ಸಂಸ್ಕೃತಿಯನ್ನು ಗಮನಿಸುವಾಗ ಮೊದಲು ತಿಳಿಯಬೇಕಾದ ವಿಷಯವೆಂದರೆ ಈ ಯಾವ ಜನಾಂಗದ ಬೇರೂ ಸಿಂಗಪುರದಲ್ಲಿಲ್ಲ. ಈ ಎಲ್ಲರೂ ಬೇರೆ ಬೇರೆ ಕಾಲಗಳಲ್ಲಿ ಇಲ್ಲಿಗೆ ವಲಸೆ ಬಂದವರೇ. ವಲಸೆಜನಾಂಗಗಳು ಮೂಲ ಸಂಸ್ಕೃತಿಯನ್ನು ಯಥಾವತ್ತಾಗಿ ಉಳಿಸಿಕೊಳ್ಳುವುದಿಲ್ಲವಾದರೂ ಕೆಲವು ಗಾಢ ನಂಬಿಕೆಗಳು, ಅದರಲ್ಲೂ ಹೆಣ್ಣಿನ ಬಗ್ಗೆಯಿರುವ ನಂಬಿಕೆಗಳು ಖಂಡಿತಾ ತಲತಲಾಂತರಕ್ಕೂ ಉಳಿದುಕೊಂಡೇ ಬರುತ್ತದೆ.

ಸಿಂಗಪುರದ ಚೀನೀಯರು ಹೆಚ್ಚು ಪಾಶ್ಚಾತ್ಯ ಸಂಸ್ಕೃತಿಯನ್ನು ಅಳವಡಿಸಿಕೊಂಡಿರುವುದರಿಂದ ಪ್ರೇಮವಿವಾಹಗಳೇ ಜಾಸ್ತಿ. ಆದರೆ ಇದರಲ್ಲೂ ಅನೇಕ ತೊಡಕುಗಳಿವೆ. ಸಿಂಗಪುರದ ಯುವಕರು ತಮ್ಮ ಹದಿನಾರನೇ ವಯಸ್ಸಿನಲ್ಲಿ ಕಡ್ಡಾಯವಾಗಿ ಸೇನೆಯಲ್ಲಿ ಎರಡು ವರ್ಷ ಸೇವೆ ಸಲ್ಲಿಸಬೇಕು. ಈ ಕಾರಣದಿಂದ ಸಮವಯಸ್ಕ ಯುವತಿಯರು ಯುವಕರಿಗಿಂತ ಓದಿನಲ್ಲಿ, ಉದ್ಯೋಗದಲ್ಲಿ ಮುಂದೆ ಇರುತ್ತಾರೆ. ತನಗಿಂತ ಹೆಚ್ಚು ಓದಿದವಳನ್ನು ಉದ್ಯೋಗದಲ್ಲಿ ಮುಂದುವರಿದವಳನ್ನು, ಹೆಚ್ಚು ಸಂಬಳತರುವವಳನ್ನು ಸಿಂಪುರದ ಯುವಕ ಮದುವೆಯಾಗಲಿಚ್ಛಿಸುವುದಿಲ್ಲ. ಭಾರತದ ಯುವಕರಂತೆಯೇ ಎಲ್ಲ ರೀತಿಯಲ್ಲೂ ಹೆಂಡತಿಯಾದವಳು ತನಗಿಂತ ಕಡಿಮೆಯಿದ್ದರೇ ಸಂಸಾರದ ಬದುಕು ಸುಗಮವಾಗಿರುತ್ತದೆ ಎನ್ನುವ ನಂಬಿಕೆ! ಹೀಗಾಗಿ ಈ ಸಮಾಜ ಪ್ರೇಮಕ್ಕೆ ಮುಕ್ತವಾತಾವರಣವನ್ನು ಕಲ್ಪಿಸಿಯೂ "ಅವರ್ ಬಿಟ್ಟ್ ಇವರ್ ಯಾರು ? ಎನ್ನುವ ಹಾಗೆ ತಮ್ಮ ಸಂಗಾತಿಗಳನ್ನು ಬದಲಿಸುತ್ತಲೇ ಇರುತ್ತಾರೆ. ಮುಕ್ತವಾತಾವರಣ, ಹದಿವಯಸ್ಸಿನಲ್ಲೇ ಲೈಂಗಿಕಪ್ರಯೋಗಗಳು, ಅವಿವಾಹಿತ ತಾಯಿಗೆ ಸಮಾಜದಲ್ಲಿ ಗೌರವವಿಲ್ಲ, ಇವೆಲ್ಲದರ ಪರಿಣಾಮ, ಸಣ್ಣ ಹುಡುಗಿಯರು ಗರ್ಭಪಾತಕ್ಕೆ ಒಳಗಾಗುತ್ತಲೇ ಇರುತ್ತಾರೆ. ಅಲ್ಲಿಯ ದೂರದರ್ಶನದಲ್ಲಿ ಹೆಣ್ಣುಮಕ್ಕಳ ತಾಯಂದಿರ ಸಮಸ್ಯೆಯ ಬಗ್ಗೆ ಒಂದು ಟಾಕ್ ಶೋದಲ್ಲಿ ಒಬ್ಬ ತಾಯಿ ಹೇಳಿದರು "ನನಗೆ ಮೂರುಜನ ಹೆಣ್ಣು ಮಕ್ಕಳಿದ್ದಾರೆ. ನಾನೋ ಉದ್ಯೋಗಸ್ಥೆ. ಇವರನ್ನು ಕಾಯುವುದು ನನಗೆ ಕಷ್ಟದ ಕೆಲಸ. ಅದಕ್ಕೇ ಒಂದು ಉಪಾಯ ಕಂಡುಕೊಂಡಿದ್ದೇನೆ. ಮಕ್ಕಳು ಋತುಮತಿಯರಾದ ತಕ್ಷಣದಿಂದ ಗರ್ಭನಿರೋಧಕ ಮಾತ್ರೆಯನ್ನು ಪ್ರತಿರಾತ್ರಿ ನುಂಗಿಸಿ ಬಿಡುತ್ತೇನೆ" ಈ ಒಂದು ಮಾತಿನಿಂದಲೇ ಆ ತಾಯಂದಿರ ಮತ್ತು ಹೆಣ್ಣು ಮಕ್ಕಳ ಒತ್ತಡಗಳು ಅರ್ಥವಾಗುತ್ತವೆ.

ಸಿಂಗಪುರದ ಚೀನೀ ಮಹಿಳೆಯರು ಹೆಚ್ಚಿನಂಶ ಮನೆಯಲ್ಲಿ ಅಡಿಗೆ ಮಾಡುವುದಿಲ್ಲ. ಬೆಳಗಿನ ತಿಂಡಿ, ಮಧ್ಯಾನದ ಊಟ, ಸಂಜೆ ಮತ್ತು ರಾತ್ರಿ ತಮ್ಮ ತುತ್ತಿನಚೀಲ ತುಂಬಿಸಲು ಹೊರಗೇ ಅಲೆಯುತ್ತಿರುತ್ತಾರೆ. ಸರ್ಕಾರವು ಇದನ್ನೇ ಉತ್ತೇಜಿಸುತ್ತದೆ. ಹೆಚ್ಚಿನ ಸಂಖ್ಯೆಯಲ್ಲಿ ಹಾಕರ್ ಸೆಂಟರ್‌ಗಳನ್ನು ನಡೆಸಲು ಪರವಾನಗಿ ನೀಡುತ್ತದೆ. ಈ ಸೆಂಟರ್‌ಗಳನ್ನು ಬಹಳಷ್ಟು ಕಡೆ ಮಹಿಳೆಯರೇ ನಡೆಸುತ್ತಾರೆ. ಇಲ್ಲಿ ಬೆಳಗಿನ 9 ಗಂಟೆಯಿಂದ ರಾತ್ರಿ 10ರವರೆಗೆ ಉತ್ತಮದರ್ಜೆಯ ವೈವಿಧ್ಯಮಯವಾದ ಬಿಸಿಬಿಸಿ ಆಹಾರಗಳು ಲಭ್ಯವಿರುತ್ತದೆ. ಇಲ್ಲಿ ಆಹಾರ ಇಲಾಖೆಯ ಮಂದಿ ಪ್ರತಿನಿತ್ಯ ಬಂದು ಪರೀಕ್ಷಿಸುವುದರಿಂದ, ಹಾಗೂ ಚೀನಿಯರೇ ಶುಚಿಗೆ ಬಹಳ ಮಹತ್ವಕೊಡುವುದರಿಂದ ಇಲ್ಲಿ ಎಲ್ಲವೂ ಅತ್ಯಂತ ಶುಚಿಯಾಗಿರುತ್ತದೆ. ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಜನ ಮೆಚ್ಚುವ ಬೆಲೆಯಲ್ಲಿ ಇಲ್ಲಿ ಊಟ ತಿಂಡಿಗಳು ಸಿಗುತ್ತದೆ. ಇದನ್ನೇ ಮನೆಯಲ್ಲಿ ಮಾಡಿದರೆ ದುಬಾರಿಯಾಗುವುದರಿಂದಲೂ, ಅಷ್ಟೊಂದು ವೆರೈಟಿ ತಯಾರಿಸಲು ತುಂಬ ಸಮಯ ಅಡಿಗೆಮನೆಯಲ್ಲಿ ಕಳೆಯಬೇಕಾಗುವುದರಿಂದಲೂ ಚೀನಿ ಮಹಿಳೆಯರು ಹಾಕರ್ ಸೆಂಟರ್‌ಗಳನ್ನೇ ಅವಲಂಬಿಸುತ್ತಾರೆ. ಉದ್ಯೋಗಸ್ಥರಲ್ಲದ ಗೃಹಿಣಿಯರೂ ಹಾಕರ್ ಸೆಂಟರ್‌ಗೆ ಹೋಗುವುದನ್ನು

ಕಂಡಾಗ ನಮ್ಮಂತಹವರಿಗೆ ಮಜವೆನಿಸುತ್ತದೆ. ಕಾರಣವೇನೇಯಿರಲಿ ಈ ಮಹಿಳೆಯರಂತೂ ಅಡಿಗೆ ಮನೆಯಿಂದ ಮುಕ್ತಿಹೊಂದಿದ್ದಾರೆ.

ಮಕ್ಕಳ ಸಂಗೋಪನೆಯಿಂದ ಚೀನೀ ಮಹಿಳೆಗೆ ಬಿಡುಗಡೆಯಿಲ್ಲ. ಬಿಡುಗಡೆ ಬೇಡ ಸಮಧಾನ ಸಹಕಾರವೂ ಗಂಡನಿಂದ ಸಿಕ್ಕಲೇ ಬೇಕೆಂಬ ನಿಯಮವೇನೂ ಇಲ್ಲ. ಪ್ರೇಮ ವಿವಾಹದ ವಿಚಾರದಲ್ಲಿ ಪಾಶ್ಚಾತ್ಯರನ್ನು ಅನುಕರಿಸುವ ಈ ಮಂದಿ ಮಕ್ಕಳ ವಿಚಾರದಲ್ಲಿ ಶುದ್ಧ ಸಂಪ್ರದಾಯವಾದಿ ಚೀನೀಯರ ಆಗಿಬಿಡುತ್ತಾರೆ. ಗಂಡನಿಗೆ ಇಷ್ಟವಿದ್ದರೆ ಆತ ಮಕ್ಕಳ ಯೋಗಕ್ಷೇಮವನ್ನು ಗಮನಿಸಿಯಾನು ಇಲ್ಲದಿದ್ದರೆ ಇಲ್ಲ. ಆದರೆ ಮುಖ್ಯ ನಿರ್ಣಯಗಳನ್ನು ಮಾತ್ರ ಗಂಡನೇ ಅಂಗೀಕರಿಸುವವನು. ಹೆಂಡತಿ ಅವನ ಅನುಯಾಯಿ ಮಾತ್ರ.

ವಿವಾಹ ವಿಚ್ಛೇದನ ಸಂಗಪುರದಲ್ಲಿ ಯಾವ ಜನಾಂಗಕ್ಕೂ ಸುಲಭವಲ್ಲ. ಅಲ್ಲಿ ಮನೆಯ ವ್ಯವಸ್ಥೆ ಸರ್ಕಾರವೇ ಮಾಡುವುದರಿಂದ ಕೆಲವು ನಿಯಮಗಳು ಬಹಳ ಕಟ್ಟುನಿಟ್ಟಾಗಿವೆ. "ಒಂದು ಸಂಸಾರಕ್ಕೆ ಒಂದು ಮನೆ" ಎನ್ನುವುದು ಸರ್ಕಾರದ ಸ್ಲೋಗನ್. ಅದಲ್ಲಿ ಗಂಡುಮಕ್ಕಳು ಮದುವೆಯಾದ ತಕ್ಷಣ ಬೇರೆ ಮನೆ ಮಾಡಿ ಸಂಸಾರ ನಡೆಸುವುದು ಚೀನೀ ಜನಾಂಗಕ್ಕೆ ತುಂಬ ಒಪ್ಪಿತವಾದ ವಿಚಾರ. ಮನೆ ಬಾಡಿಗೆಯದಿರಲಿ. ಸ್ವಂತದ್ದಿರಲಿ ಅದನ್ನು ಕೊಡುವುದು ಸರ್ಕಾರವೇ ಆದ್ದರಿಂದ. ಹಲವಾರು ಕಾರಣಗಳಿಂದಾಗಿ ಕೆಲವು ವಿಚಿತ್ರ ಕಾನೂನುಗಳಿವೆ. ವಿಚ್ಛೇದಿತ ಗಂಡನಿಂದ ಮನೆಯನ್ನು ವಾಪಸ್ ಕಿತ್ತುಕೊಳ್ಳಲಾಗುತ್ತದೆ. ಹೆಂಡತಿ ತನ್ನ ಮಕ್ಕಳೊಂದಿಗೆ ಕೋರ್ಟಿನ ಅನುಮತಿ ಪಡೆದು ಆ ಮನೆಯಲ್ಲಿ ವಾಸಿಸಬಹುದು. ಗಂಡ ಮತ್ತೊಂದು ಮದುವೆಯಾಗುವವರೆಗೆ ಮತ್ತೆ ಮನೆಗಾಗಿ ಅರ್ಜಿ ಹಾಕುವಂತಿಲ್ಲ. ಅಲ್ಲದೆ ಮತ್ತೆ ಮನೆ ಸಿಗಲು ಬಹಳ ಕಾಲ ಕಾಯಬೇಕಾಗುತ್ತದೆ. ಈ ಎಲ್ಲ ಕಾರಣಗಳಿಂದ ವಿಚ್ಛೇದನಕ್ಕೆ ಕೋರ್ಟಿಗೆ ಹೋಗುವವರ ಸಂಖ್ಯೆ ಕಡಿಮೆ. ಆದರೆ ಮುರಿದ ಮನಸ್ಸುಗಳ ಸಮಸ್ಯೆ ಮತ್ತೊಂದು ರೂಪವನ್ನು ಪಡೆಯುತ್ತದೆ. ಒಂದು ಅಧ್ಯಯನದ ಪ್ರಕಾರ ಸಿಂಗಪುರದಲ್ಲಿ ದಿನದಿಂದ ದಿನಕ್ಕೆ 'ಕುಟುಂಬ ಕ್ರೌರ್ಯ' ಹೆಚ್ಚುತ್ತಿದೆ. ಇಲ್ಲಿ ಹೊಡೆತ ಬಡಿತಗಳಿಗೆ ಮತ್ತೆ ಬಲಿಯಾಗುತ್ತಿರುವವಳು ಮಹಿಳೆಯೇ.

ಅವೇರ್ ಎನ್ನುವ ಮಹಿಳಾ ಸಂಸ್ಥೆಯೊಂದು ಕೆಲವು ವರ್ಷಗಳ ಹಿಂದೆ ಸ್ಥಾಪನೆಯಾದಾಗ ಅದನ್ನು ಬಲವಾಗಿ ವಿರೋಧಿಸಿದವರು ಗಂಡಂದಿರು ಮತ್ತು ಅದಕ್ಕಿಂತಾ ಹೆಚ್ಚಾಗಿ ಇನ್ನೂ ಮದುವೆಯ ದಾರಿಯಲ್ಲಿದ್ದ ಬಾಯ್ ಫ್ರೆಂಡ್‌ಗಳು! "ನೀನು ಆ ಸಂಸ್ಥೆಗೆ ಸದಸ್ಯೆಯಾದರೆ ನಿನ್ನನ್ನು ಮದುವೆಯೇ ಆಗುವುದಿಲ್ಲ ಎನ್ನುವ ಬೆದರಿಕೆಗಳ ಸುರಿಮಳೆಯಾದಾಗ ಸಂಸ್ಥೆ ನಿಜಕ್ಕೂ ನಿಲ್ಲುತ್ತದೆಯೇ ಎನ್ನುವ ಚಿಂತೆಯಾಗಿತ್ತು" ಎನ್ನುತ್ತಾರೆ ಸಂಸ್ಥೆಯ ಸ್ಥಾಪಿತ ಅಧ್ಯಕ್ಷೆ ಶ್ರೀಮತಿ ಹೆಡ್ ವಿಕ್ ರವರು.

'ಈಗ್ಯೆ ಕೇವಲ 25ವರ್ಷಗಳ ಹಿಂದೆ ಬ್ರಿಟಿಷರ ಕಾಲನಿಯಾಗಿದ್ದ ಈ ನೆಲ ಇಂದು ಒಂದು ಕಂಟ್ರಿಯಾಗಿ ಬೆಳೆದಿದೆ. ವರ್ಲ್ಡ್ ಟ್ರೇಡ್ ಸೆಂಟರ್ ಅನ್ನು ಅಮೆರಿಕೆಯ ಸಮಸಮಕ್ಕೆ ಬೆಳೆಸಿದ್ದೇವೆ' ಎಂದೆಲ್ಲಾ ಕೊಚ್ಚಿಕೊಳ್ಳುವ ಈ ದೇಶ ಮಹಿಳೆಯರ ಸ್ಥಿತಿ ಗತಿಯ ಬದಲಾವಣೆಯ ವಿಚಾರಕ್ಕೆ ಬಂದಾಗ ಹೇಗೆ ಹಿಂದಿನ ನಂಬಿಕೆಗಳಿಗೇ ಅಂಟಿಕೊಳ್ಳುತ್ತದೆ ಎನ್ನುವುದಕ್ಕೆ ಈ ಮೇಲಿನ ಬೆದರಿಕೆಯೇ ಸಾಕ್ಷಿ. ಕುಟುಂಬ ಕ್ರೌರ್ಯದ ಸಮಸ್ಯೆಯ ಪರಿಹಾರಕ್ಕಾಗಿ ಅವೇರ್ ನಂಥಾ ಅನೇಕ ಸಂಸ್ಥೆಗಳು ಒಂದು ಗೂಡಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತವೆ. ವಿಚಾರ ಸಂಕಿರಣಗಳಾಗಲೀ ಶಿಬಿರಗಳಾಗಲೀ ನಡೆದರೆ ಯಥಾಪ್ರಕಾರ ಅದರಲ್ಲಿ ಭಾಗವಹಿಸುವವರು ಶೋಷಣೆಗೆ ಒಳಗಾದ ವರ್ಗವೇ ವಿನಃ ಯಾರಿಗೆ ಮುಖ್ಯವಾಗಿ ಅದು ತಲುಪಬೇಕೋ ಆ ಜನ ಅಲ್ಲಿಗೆ ಬರುವುದೇ ಇಲ್ಲ.

ಸಿಂಗಪುರದ ಮುಸ್ಲಿಮರಲ್ಲಿ ಮದುವೆ ಮತ್ತು ವಿಚ್ಛೇದನಗಳು ಧಾರ್ಮಿಕತೆಯ ನೆರಳಿನಲ್ಲೇ ನಡೆಯುತ್ತಿದೆ. ಪ್ರೇಮವಿವಾಹ ವಿರಳವಾದರೂ ಸಾಧ್ಯವಿದೆ. ಆದರೆ ವಿಚ್ಛೇದನ ಸುಲಭವಲ್ಲ. ಕೋರ್ಟಿನಲ್ಲಿ ಎಲ್ಲರಿಗೂ ಸಮಾನ ಕಾನೂನಿರುವುದರಿಂದ ಮಹಿಳೆಯರಿಗೆ ಅನ್ಯಾಯವಾಗುವ ಸಾಧ್ಯತೆ ಕಡಿಮೆ. ಆದರೆ ಬಹು ಪತ್ನಿತ್ವ ಅತಿ ವಿರಳವಾದರೂ ಅಲ್ಲಲ್ಲಿ ನುಸುಳಿಬಿಟ್ಟಿದೆ.

ಸಿಂಗಪುರದ ಭಾರತೀಯರು ಮದುವೆಯ ಪಾವಿತ್ರತೆಯನ್ನು ಬಿಟ್ಟುಕೊಟ್ಟಿಲ್ಲ. ಹೀಗಾಗಿ ಮೂರು ಜನಾಂಗಗಳನ್ನು ಅಭ್ಯಸಿಸಿದರೆ ಮದುವೆ ಮತ್ತದರ ನಂತರದ ಸಮಸ್ಯೆ ಭಾರತೀಯರಲ್ಲಿ ಕಡಿಮೆ ಎಂದು ಒಂದು ಅಧ್ಯಯನ ತಿಳಿಸುತ್ತದೆ. ಈ ಕಾರಣಕ್ಕಾಗಿಯೇ ಚೀನೀ ಮತ್ತು ಮಲೈ ಹುಡುಗಿಯರು ಒಳ್ಳೆಯ ಉದ್ಯೋಗದಲ್ಲಿರುವ ಭಾರತೀಯನನ್ನು ಅವನು ಕಪ್ಪಗಿದ್ದರೂ ಮದುವೆಯಾಗಲು ಮುಂದೆ ಬರುತ್ತಿದ್ದಾರೆ ಎಂದು ಅದೇ ಅಧ್ಯಯನ ತಿಳಿಸುತ್ತದೆ.

*- ಶಾಂತಾ ನಾಗರಾಜ್*

# ನೋವ ನುಂಗಿ ನಕ್ಕವರು

*ಲೇಖಕಿ : ಎಚ್. ಎಸ್. ಪಾರ್ವತಿ*

*ಶ್ರೀ ಪ್ರೇಮಸಾಯಿ ಪ್ರಕಾಶನ, ಬೆಂಗಳೂರು*

ಸಾವಿರಾರು ವರ್ಷಗಳ ಇತಿಹಾಸವಿರುವ ರಾಮಾಯಣ ಸಾವಿರಾರು ಜನ ಲೇಖಕರಿಗೆ ಸ್ಫೂರ್ತಿ ನೀಡಿದೆ. ಆಯಾ ಕಾಲದ ಸಾಮಾಜಿಕ ಪರಿಸ್ಥಿತಿ ಮತ್ತು ತಮ್ಮ ನಂಬಿಕೆಗಳಿಗೆ ಅನುಸಾರವಾಗಿ ಪ್ರತಿ ಕವಿಯೂ ತನ್ನ ಕೃತಿಯನ್ನು ರಚಿಸಿದ. ರಾಮಾಯಣವನ್ನು ಕುರಿತ ಇಂಥಾ ಬಹಳಷ್ಟು ಕೃತಿಗಳ ಅಧ್ಯಯನ ಮಾಡಿ, ಅಲ್ಲಿಯ ಅಚ್ಚರಿಯ ವಿವರಗಳನ್ನು ವ್ಯತ್ಯಾಸಗಳನ್ನು ಎಚ್.ಎಸ್. ಪಾರ್ವತಿ ಅವರು 'ನೋವು ನುಂಗಿ ನಕ್ಕವರು' ಪುಸ್ತಕದಲ್ಲಿ ತೆರೆದಿಟ್ಟಿದ್ದಾರೆ. ಬಹಳ ಮುಖ್ಯವಾಗಿ ತಮಗೆ ಆಪ್ತವಾದ ಸ್ತ್ರೀ ಪಾತ್ರಗಳನ್ನು ದೀರ್ಘವಾಗಿ ವಿಶ್ಲೇಷಿಸಿದ್ದಾರೆ.

ಬಹಳಷ್ಟು ಜನ ವಾಲ್ಮೀಕಿಯ ರಾಮಾಯಣವೇ ಮೂಲದ್ದು ಎಂದು ನಂಬಿರುವುದುಂಟು. ವಾಲ್ಮೀಕಿ ತನ್ನ ಕಾವ್ಯವನ್ನು ರಚಿಸುವ ಹೊತ್ತಿಗಾಗಲೇ ನಮ್ಮ ದೇಶದಲ್ಲಿ ಹಿಂದೂ ಮತವಲ್ಲದೆ, ಜೈನ ಮತ್ತು ಬೌದ್ಧ ಧರ್ಮಗ್ರಂಥಗಳಲ್ಲೂ ರಾಮಕತೆ ಪ್ರಚಲಿತವಿತ್ತು ಎಂಬ ಮುಖ್ಯ ಅಂಶದ ಬಗ್ಗೆ ಲೇಖಕಿ ಗಮನ ಸೆಳೆಯುತ್ತಾರೆ. ಆ ಗ್ರಂಥಗಳಲ್ಲಿ ಚಿತ್ರಿತವಾದ ರಾಮ, ವಾಲ್ಮೀಕಿಯ ರಾಮನಿಗಿಂತ ಬಹಳ ಭಿನ್ನವಾದವನು. ವಾಲ್ಮೀಕಿಯ ರಾಮಾಯಣವೊಂದೇ 'ನಿಜ'ವಾದ ರಾಮಾಯಣ ಎಂದು ತಿಳಿದವರಿಗೆ 'ನಿಜ' ವಾದ ರಾಮನನ್ನು 'ಅರಿಯುವುದು' ಬಲು ಕಷ್ಟವಾಗುತ್ತದೆ.

ವಾಲ್ಮೀಕಿ ರಾಮಾಯಣ ರಚಿಸುವ ಮುಂಚೆಯೇ ರಾಮನ ಕಥೆ ವಿವಿಧ ದೇಶಗಳಲ್ಲಿ ವಿವಿಧ ಧರ್ಮಗಳ ಗ್ರಂಥಗಳಲ್ಲಿ ವ್ಯಾಪಕವಾಗಿ ಹರಡಿತ್ತು. ವಾಲ್ಮೀಕಿ ತಮ್ಮ ನಂಬಿಕೆ, ಆದರ್ಶ ಮತ್ತು ಅಂದಿನ ಸಾಮಾಜಿಕ ಮೌಲ್ಯಗಳಿಗೆ ಅನುಸಾರವಾಗಿ ರಾಮಾಯಣವನ್ನು ರಚಿಸಿದರು ಎಂದು ಲೇಖಕಿ ಸ್ಪಷ್ಟ ಪಡಿಸುತ್ತಾರೆ. ಇಷ್ಟರಲ್ಲಾಗಲೇ ಹಿಂದೂ ಸಮಾಜ ಮಾತೃಪ್ರದಾನ ಸಮಾಜದ ಕೊಂಡಿಯನ್ನು ಕಳಚಿಕೊಂಡು ಪಿತೃಪ್ರಧಾನ ಸಮಾಜ ವ್ಯವಸ್ಥೆಯನ್ನು ಒಪ್ಪಿಕೊಂಡಿತ್ತು ಎಂಬ ವಿಚಾರವನ್ನು ಗಮನಕ್ಕೆ ತರುತ್ತಾರೆ. ಈ ಹಿನ್ನೆಲೆಯಲ್ಲಿ ರಾಮಾಯಣ ಪಿತೃಪ್ರಧಾನ, ಪುರುಷ ಪ್ರಧಾನ ಅಂಶಗಳಿಂದ ತುಂಬಿ ಹೋಗಿ, ಅಲ್ಲಿಯ ಮಹಿಳೆಯರು ಇಂಥಾ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪಡುವ ಪಾಡಿನತ್ತ ಲೇಖಕಿ ಬೆಳಕು ಚೆಲ್ಲುತ್ತಾರೆ.

ಸೀತೆ, ಕೈಕೇಯಿ, ಮಂಥರೆ, ಶೂರ್ಪನಖಿ, ಕೌಸಲ್ಯ, ಮಂಡೋದರಿ, ಸುಮಿತ್ರಾ, ತಾರಾ, ಅಹಲ್ಯ ಮುಂತಾದ ಸ್ತ್ರೀ ಪಾತ್ರಗಳನ್ನು ಕುರಿತು ವಿಶ್ಲೇಷಿಸಿ ಬರೆದಿರುವ ಈ ಪುಸ್ತಕದ ಅರ್ಧಕ್ಕಿಂತ ಹೆಚ್ಚು ಭಾಗ ರಾಮಾಯಣದಲ್ಲಿ ಸೀತೆಯ ಹುಟ್ಟಿನಿಂದ ಹಿಡಿದು ಅಗ್ನಿಪರೀಕ್ಷೆಯವರೆಗೆ ಎಲ್ಲವೂ ಕಾಡುವ ಸನ್ನಿವೇಶಗಳೆ, ಕಾಡುವ ಪ್ರಶ್ನೆಗಳೆ. ಸೀತೆ ಯಾರ ಮಗಳು ಎಂಬ ಬಗ್ಗೆ ಕೂಡಾ ಒಮ್ಮತವಿಲ್ಲ. ವಾಲ್ಮೀಕಿ ಸೀತೆಯ ಹುಟ್ಟಿನ ಬಗ್ಗೆ ಮೌನ ತಾಳುತ್ತಾರೆ 'ಅಯೋನಿಜೆ' ಎಂದು ಸುಮ್ಮನ ಾಗುತ್ತಾರೆ. ಬುದ್ಧ ಜಾತಕದ ಪ್ರಕಾರ ರಾಮ ಮತ್ತು ಸೀತೆ ಅಣ್ಣ ತಂಗಿಯರು. ಅತಿ ಪ್ರಾಚೀನ ಕಾಲದಲ್ಲಿ ಅಣ್ಣತಂಗಿಯರ ವಿವಾಹ ನಿಷೇಧವಿರಲಿಲ್ಲ ಎಂಬ ಸಂಗತಿಯನ್ನು ಲೇಖಕಿ ಹೊರ ಹಾಕುತ್ತಾರೆ. ಚೀನಾದಲ್ಲಿ ಪ್ರಚಲಿತವಿರುವ ರಾಮಾಯಣದ ಪ್ರಕಾರ ಸೀತೆ, ರಾವಣನ ಪುತ್ರಿ.

ಬಾಲಕಿ, ಸೀತೆ, ಶಿವಧನಸ್ಸನ್ನು ಎತ್ತುತ್ತಾಳೆ, ಅದನ್ನೇ ಇಟ್ಟುಕೊಂಡು ಆಡುತ್ತಾಳೆ ಎಂಬ ಉಲ್ಲೇಖಗಳು ರಾಮಾಯಣದಲ್ಲಿ ಬರುತ್ತದೆ. ಅಖಂಡ ವೀರರಿಗೆ ಹೆದೆ ಏರಿಸಲಾಗದ ಶಿವಧನಸ್ಸನ್ನು ಸೀತೆ ಲೀಲಾಜಾಲವಾಗಿ ಎತ್ತಿ ಆಡುತ್ತಿದ್ದಳೆಂದರೆ ಅವಳೆಷ್ಟು ಶಕ್ತಿಶಾಲಿ ಇರಬೇಕು. ಆದರೆ ಅವಳ ಈ ಶಕ್ತಿ ಅವಳ ಮುಂದಿನ ಜೀವನದಲ್ಲಿ ಎಲ್ಲಿಯೂ ಪ್ರಯೋಜನಕ್ಕೆ ಬರುವುದು ಕಾಣುವುದಿಲ್ಲವಲ್ಲ ಎಂದು ಹೇಳುವ ಲೇಖಕಿ, ಪುರುಷ ವೈಭವದ ಕತೆಗಳಲ್ಲಿ 'ಸ್ತ್ರೀ ಶಕ್ತಿ' ಕಾಣೆಯಾಗುವುದನ್ನು ಸೂಚಿಸುತ್ತಾರೆ.

ಸೀತೆಯ ಅಗ್ನಿಪರೀಕ್ಷೆಯ ಸನ್ನಿವೇಶವಂತೂ ಆಯಾ ಲೇಖಕನ ನಂಬಿಕೆ, ವಿಚಾರಗಳಿಗೆ ಸ್ಪಷ್ಟ ಕನ್ನಡಿಯಂತಿದೆ. 'ಜೈನ ರಾಮಾಯಣದಲ್ಲಿ ಅಗ್ನಿಪ್ರವೇಶದ ಪ್ರಸಂಗವೇ ಬರುವುದಿಲ್ಲ. ಜೈನ ರಾಮಾಯಣದ ಪ್ರಕಾರ ರಾಮ ಕರುಣಾಳು, ಸತಿಯಲ್ಲಿ ನಂಬಿಕೆ ಇಟ್ಟವನು. ಹಾಗಾದರೆ ಸೀತೆಯ ಅಗ್ನಿಪ್ರವೇಶದ ಕಲ್ಪನೆ ಹಿಂದೂ ಸಂಪ್ರದಾಯವಾದಿಗಳ ತಲೆಯಲ್ಲೇ ಮೂಡಿದ್ದಿರಬೇಕು' ಎನ್ನುತ್ತಾರೆ. ಎಚ್. ಎಸ್. ಪಾರ್ವತಿ. ನಮ್ಮ ಕಾಲದ ಶ್ರೇಷ್ಠ ಬರಹಗಾರರ ಮಾಸ್ತಿ ಮತ್ತು ಕುವೆಂಪು ಅವರ ಕೃತಿಗಳಲ್ಲಿ ರಾಮ ಸೀತೆಯ ಬಗ್ಗೆ ಅನುಮಾನಿಸುವುವಾಗ, ಆಕೆಯನ್ನು ಎಲ್ಲರೆದುರು ಅಪಮಾನಿಸುವಾಗ ಸೀತೆಯ ಮನಸ್ಸಿನಲ್ಲಿ ಏನಾಗಿರಬಹುದು ಎಂಬತ್ತ ಗಮನವೇ ಹರಿಯದಿರುವುದು ಅಚ್ಚರಿಯಾಗಿ ಕಾಣುತ್ತದೆ. ಸೀತೆಯ ಮನಸ್ಸಿನಲ್ಲಿ ಎದ್ದಿರಬಹುದಾದ ಚಿಂತನೆಗಳಿಗೆ ಬಾಯಿ ಕೊಟ್ಟಿರುವುದು ಎಚ್. ವಿ. ಸಾವಿತ್ರಮ್ಮ ಎನ್ನುವುದನ್ನೂ ಲೇಖಕಿ ಎತ್ತಿ ತೋರಿಸುತ್ತಾರೆ. 'ಸೀತೆ ಎಂಥಾ ಪತಿವ್ರತೆಯೇ ಆದರೂ ಅವಳೂ ಒಬ್ಬ ಮನುಷ್ಯಳು, ಅಭಿಮಾನದ ಹೆಂಗಸು, ಎನ್ನುವುದನ್ನು ಸಾವಿತ್ರಮ್ಮನ ಹೊರತಾಗಿ ಎಲ್ಲ ಲೇಖಕರೂ ಮರೆತಂತಿದೆ.

ವಾಲ್ಮೀಕಿಯಿಂದ ಮಾಸ್ತಿಯವರೆಗೆ ಪುರುಷರು ಬರೆದ ರಾಮಾಯಣ ರಾಮನ ಕತೆಯನ್ನಷ್ಟೆ ಹಾಡಿತು. ಅಲ್ಲೆಲ್ಲ ಪುರುಷರ ನಿರ್ಧಾರಕ್ಕೆ ತಲೆ ಬಾಗಿ ಹಿಂಬಾಲಿಸಿದ ಸಮಾಜ-ಸಂಪ್ರದಾಯದ ಕಟ್ಟುಪಾಡಿನಲ್ಲಿ ಸಿಕ್ಕ ಬಿದ್ದ 'ನೋವು ನುಂಗಿಯೂ ನಕ್ಕ' ಮಹಿಳೆರ ಮನಸ್ಥಿತಿಯತ್ತ ಬೆಳಕು ಚೆಲ್ಲುವ ಪ್ರಯತ್ನ ಕಂಡು ಬರಲಿಲ್ಲ. ಪುರುಷ ಪ್ರಧಾನ ಸಮಾಜದ ಮೌಲ್ಯಗಳ ಹಿಡಿತದಿಂದ ಪಾರಾದ ವ್ಯಕ್ತಿಗಳು ಮಾತ್ರ, ಸದಾ ಸಿಂದೆ ಅಪಮಾನಗಳನ್ನು ನುಂಗಿಕೊಂಡು ಜೀವನ ಸಾಗಿಸಿದ ಸೀತೆ ಮುಂತಾದ ಮಹಿಳೆಯರ ಮನಸ್ಸಿನಲ್ಲಿ ಆದ ತಳಮಳವನ್ನು ಕ್ರೋಧವನ್ನು ಅವರ ಮನಸ್ಸಿನಲ್ಲಿ ಎದ್ದಿರಬಹುದಾದ ಆಲೋಚನೆಗಳನ್ನು ಸಹಜತೆಗೆ ಸಮೀಪವಾಗಿ ಅಭಿವ್ಯಕ್ತಿಸಬಲ್ಲರು' ಎನ್ನುವ ಲೇಖಕಿ ಮಾತು ಅಕ್ಷರಶಃ ನಿಜವೆನಿಸುತ್ತದೆ.

*- ನೇಮಿಚಂದ್ರ*

# ಮೀರತ್‌ನ 'ಸತಿದೇವಿ' ಯ ಸುತ್ತ

ರಾಜಸ್ಥಾನದ ರೂಪ್‌ಕನ್ವರ್ ಸತಿಪ್ರಕರಣ ಇನ್ನೂ ಜನರ ನೆನಪಿನಿಂದ ಮಾಸಿಲ್ಲ. ಅದಕ್ಕಾಗಿ ನಡೆದ ಪ್ರತಿರೋಧವೇನೂ ಅಲ್ಪವಲ್ಲ. ಇದೀಗ ಉತ್ತರ ಪ್ರದೇಶದ 'ಸತಿದೇವಸ್ಥಾನ' ಕುರಿತ ವರದಿಗಳು ವಿವಾದವನ್ನೇ ಸೃಷ್ಟಿಸಿವೆ. ವಿವಿಧ ವರ್ಗದ ಮಹಿಳೆಯರು ತಮ್ಮ ಇಷ್ಟಾರ್ಥಸಿದ್ಧಗಾಗಿ ಈ ದೇವಸ್ಥಾನಕ್ಕೆ ಭೇಟಿ ನೀಡುತ್ತಿದ್ದರು. ಮಹಿಳಾ ಚಳವಳಿಗಾರರು 'ಸತಿ' ಯನ್ನು ವೈಭವೀಕರಿಸುತ್ತಿರುವ ಆ ದೇವಸ್ಥಾನದ ಪೂಜಾರಿ ವಿರುದ್ಧ ಕಿಡಿಕಾರುತ್ತಿದ್ದಾರೆ.

ಮೀರತ್‌ನ ಸ್ಮಶಾನವಿರುವುದು ಸೂರಜ್‌ಕುಂಡ್ ಬಳಿಯೇ. ಇಲ್ಲಿರುವ ಸತಿದೇವಿ ದೇವಸ್ಥಾನವೇ ಈಗ ವಿವಾದದ ಸುಳಿಗೆ ಸಿಲುಕಿರುವುದು. ಕಳೆದ ಸೆಪ್ಟೆಂಬರ್‌ನಲ್ಲಿ ಆ ದೇವಸ್ಥಾನದ ಪೂಜಾರಿ ವಿಷ್ಣುದತ್ತ ರಿಷಿ ಅವರು ಕ್ಯಾನೊಕನ್ವರ್ 'ಸತಿ' ಯ 976ನೇ ವಾರ್ಷಿಕೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿದರು. ಯಜ್ಞವನ್ನು ಕೂಡ ವ್ಯವಸ್ಥೆಗೊಳಿಸಲಾಗಿತ್ತು. ಈ ಸಂದರ್ಭದಲ್ಲಿ ಪೂಜಾರಿ ರಿಷಿಯವರು ಸತಿದೇವಿಯನ್ನು ಪೂಜಿಸುವ ಕ್ರಮಗಳನ್ನು ವಿವರಿಸುವ ನಾಲ್ಕು ಪುಟಗಳ ಪುಸ್ತಿಕೆಯೊಂದನ್ನು ಹೊರತಂದರು. ಕಮಿಷನರ್ ಅವರ ಪತ್ನಿ ಸುಂದರಿ ವಿಶ್ವನಾಥನ್ ಮತ್ತು ಜಿಲ್ಲಾ ಮ್ಯಾಜಿಸ್ಟ್ರೇಟ್ ಅವರ ಪತ್ನಿ ಸೋಗಿ ಅಗರ್‌ವಾಲ್ ಅವರು ವೇದ ಘೋಷಗಳ ಮಧ್ಯೆ ಈ ಪುಸ್ತಿಕೆಯನ್ನು ಬಿಡುಗಡೆ ಮಾಡಿದ್ದಾರೆ. ಇದರ ಮೂಲಕ ಸತಿಯನ್ನು ವೈಭವೀಕರಿಸಿ ಪ್ರಚಾರ ಮಾಡುವ ಪ್ರಯತ್ನ ನಡೆಸಿದೆ ಎಂದು ಮಹಿಳಾ ಚಳವಳಿಗಾರರು ಆರೋಪಿಸಿದ್ದಾರೆ.

ಈ ಪುಸ್ತಿಕೆಯ ಮುಖಪುಟದ ಮೇಲೆ ಈಗ ಪೂಜೆ ನಡೆಯುತ್ತಿರುವ ಸತಿ ದೇವಸ್ಥಾನದಲ್ಲಿರುವ ಸತಿದೇವಿಯ ವಿಗ್ರಹದ ಚಿತ್ರವಿದೆ. ಅಂತಿಮ ಸಂಸ್ಕಾರಕ್ಕೆ ಸಿದ್ಧವಾಗಿರುವ ಪತಿಯ ಶವವನ್ನು ಕ್ಯಾನೊ ಕನ್ವರ್ ತನ್ನ ತೊಡೆಯ ಮೇಲಿರಿಸಿಕೊಂಡಿರುವಂತಹ ಚಿತ್ರವಿದು. ಈ ಪುಸ್ತಿಕೆಯಲ್ಲಿ ಸತಿಯನ್ನು ಪೂಜೆ ಮಾಡುವ ರೀತಿ. ಭಕ್ತರು ಹರಕೆ ಮಾಡಿಕೊಳ್ಳುವ ಮುನ್ನ. ಇಷ್ಟಾರ್ಥ ಸಿದ್ಧಿಸಿದ ಮೇಲೆ ಮಾಡಬೇಕಾದ ಕ್ರಮಗಳಲ್ಲದೆ ದೇವಸ್ಥಾನಕ್ಕೆ ಭೇಟಿ ನೀಡಬೇಕಾದಾಗ ಅನುಸರಿಸಬೇಕಾದ ರೀತಿರಿವಾಜುಗಳ ಪೂರ್ಣ ವಿವರವಿದೆ.

ರಾಷ್ಟ್ರೀಯ ಮಹಿಳಾ ಆಯೋಗ ಹಾಗೂ ಮಹಿಳಾ ಸಂಘಟನೆಗಳ ಒತ್ತಾಯದ ಮೇರೆಗೆ ಮೀರತ್ ಜಿಲ್ಲಾ ಆಡಳಿತವು ಈ ಪುಸ್ತಿಕೆಯ 100 ಪ್ರತಿಗಳನ್ನು ವಶಪಡಿಸಿಕೊಂಡಿದೆ. ಶ್ರೀಮತಿ ಸುಂದರಿ ಮತ್ತು ಶ್ರೀಮತಿ ಸೋನಿ ಈ ವಿಷಯದಲ್ಲಿ ತಮ್ಮ ಪ್ರತಿಕ್ರಿಯೆ ವ್ಯಕ್ತ ಪಡಿಸಲು ನಿರಾಕರೀಸಿದ್ದಾರೆ. ಮಹಿಳಾ ಆಯೋಗದ ಅಧ್ಯಕ್ಷೆ ವಿಭಾ ಪಾರ್ಥಸಾರಥಿ ಸತಿಯ ವೈಭವೀಕರಣವನ್ನು ಖಂಡಿಸಿದ್ದಾರೆ. ಇವೆಲ್ಲದರ ಫಲಶ್ರುತಿ ಎಂದರೆ ಕೇಂದ್ರ ಮಹಿಳಾ ಮತ್ತು ಶಿಶುಕಲ್ಯಾಣ ಇಲಾಖೆ ಹಾಗೂ ಮಾನವಸಂಪನ್ಮೂಲ ಅಭಿವೃದ್ಧಿ ಸಚಿವಾಲಯವು ಮಹಿಳಾ ಆಯೋಗದೊಂದಿಗೆ ಸಮಾಲೋಚಿಸಿ ಉತ್ತರ ಪ್ರದೇಶದ ಮುಖ್ಯ ಕಾರ್ಯದರ್ಶಿಯವರಿಗೆ ಪತ್ರ ಬರೆದು ಸತಿಯನ್ನು ಪ್ರಚಾರ ಮಾಡಿ ವೈಭವೀಕರಿಸುತ್ತಿರುವವರ ವಿರುದ್ಧ ಕೈಗೊಂಡಿರುವ ಕ್ರಮಗಳ ಬಗೆಗೆ ತಿಳಿಸಲು ಆದೇಶಿಸಿರುವುದು.

ಈ ಸಂದರ್ಭದಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರ್ತಿ ಶ್ರೀಮತಿ ಶಕುಂತಲಾ ಗೋಯಲ್ ಅವರ ಪ್ರತಿಕ್ರಿಯೆ ಗಮನಾರ್ಹ. ಇಬ್ಬರು ಅಧಿಕಾರಿಗಳ ಈ ಪತ್ನಿಯರು ಕೂಡಲೇ ಕ್ಷಮೆ ಕೋರಬೇಕು. ಅದಕ್ಕಾಗಿ ಚಳವಳಿ ನಡೆಸಿ ಎಂದು ಅವರು ಮಹಿಳೆಯರಿಗೆ ಕರೆ ನೀಡಿದ್ದಾರೆ. 'ಸತಿ ಮಂದಿರ ಎಂದು ಯಾವ ದೇವಸ್ಥಾನಕ್ಕೂ ಹೆಸರಿಡಬಾರದು' ಎಂದೂ ಅವರು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಮೀರತ್‌ನಲ್ಲಿ ಬದುಕಿ ಬಾಳಿರುವ ಈ ಹಿರಿಯರಲ್ಲಿ ಹೋರಾಟದ ಶಕ್ತಿ ಕುಂದಿಲ್ಲ. ಮೀರತ್‌ನಲ್ಲಿಯೇ ಇರುವ ತಾವು ಇಂಥ ದೇವಸ್ಥಾನದ ಬಗೆಗೆ ಕೇಳಿಯೇ ಇರಲಿಲ್ಲ

ಎನ್ನುತ್ತಾರೆ. 'ರಾಜಸ್ಥಾನದಲ್ಲಿ ರೂಪ್ ಕನ್ವರ್ ಘಟನೆ ನಡೆದಾಗ ನಾವು ಇಲ್ಲಿ ಪ್ರತಿಭಟನೆ ವ್ಯಕ್ತ ಪಡಿಸಿದ್ದೆವು. ಆಗ ಕೂಡ ಯಾರೂ ಮಿರಾತ್ ಸತಿ ದೇವಸ್ಥಾನದ ಬಗೆಗೆ ಪ್ರಸ್ತಾಪಿಸಿರಲಿಲ್ಲ. ಹಾಗಾದರೆ ಇದು ಹುಟ್ಟಿಕೊಂಡದ್ದಾದರೂ ಹೇಗೆ ಎಂದು ಪ್ರಶ್ನಿಸಿದ್ದಾರೆ.

ಪೂಜಾರಿ ರಿಷಿ ಅವರ ಪ್ರಕಾರ ಕ್ಯಾನೊನ್ವರ್ ಮತ್ತು ದೇವಸ್ಥಾನವು ನಮ್ಮನ್ನು ಮೋಘಲ್‌ರ ಕಾಲಕ್ಕೆ ಒಯ್ಯುತ್ತದೆ. ಮಿರಾತ್‌ನ ಧೂಲ್ಕೀ ಬಡಾವಣೆಯಲ್ಲಿ ವಾಸಿಸುತ್ತಿದ್ದ ಕ್ಯಾನೊ ರಜಪೂತಮಹಿಳೆ. ಅವರ ಪತಿ ರಾಜನ ಸೇನೆಯಲ್ಲಿ ಅಧಿಕಾರಿ ಸಮಯದಲ್ಲಿ ಈ ಸೇನಾಧಿಕಾರಿ ಸತ್ತು ಅವನ ಶವ ಬರುತ್ತದೆ. ಕ್ಯಾನೊ ಗಂಡನ ಶವದೊಂದಿಗೆ ತಾನೂ ಬೆಂಕಿ ಹಚ್ಚಿಕೊಂಡು 'ಸತಿ' ಹೋಗುತ್ತಾಳೆ. ಅವಳು 'ಸತಿ' ಹೋದ ಸ್ಥಳದಲ್ಲೇ ಈಗಿನ ದೇವಸ್ಥಾನವಿರುವುದು ಎನ್ನುತ್ತಾರೆ ಪೂಜಾರಿ ರಿಷಿ.

ಆದರೆ 1961ಕ್ಕೆ ಮೊದಲು ಈ ಪೂಜಾರಿ ಹೇಳಿದ ಸ್ಥಳದಲ್ಲಿ ಇದ್ದದ್ದು ಕಲ್ಲು ಚಪ್ಪಡಿ ಮಾತ್ರ. ಮೊಘಲ್ ಶಿಲ್ಪಕಲಾ ಮಾದರಿಯಲ್ಲಿ ಈ ಕಲ್ಲು ಕಾಣುತ್ತಿತ್ತು. ಅದರ ಮೇಲೆ ಪರ್ಷಿಯನ್ ಭಾಷೆಯಲ್ಲಿ ಕೆತ್ತಲಾಗಿತ್ತು. ಅದರಲ್ಲಿ ಕ್ಯಾನೊ ಕನ್ವರ್ ಎಂಬ ಹೆಸರಿನ ಉಲ್ಲೇಖ ಹಾಗೂ ಕಾಲ ಸಂವತ್ 1080 ಹಿಂದೂ ಕ್ಯಾಲೆಂಡರ್ ಎಂದಿತ್ತು. ಇದಿಷ್ಟು ಇತಿಹಾಸ ಉಳಿದವೆಲ್ಲ ಬರೀ ಕೇಳಿದ್ದು.

ರಿಷಿ ಪೂಜಾರಿ ರಿಷಿ ಅವರ ಪ್ರಕಾರ ಅವರ ತಂದೆ ಪೂಜಾರಿಯಾಗಿದ್ದಾಗ. ಸತಿ ದೇವಸ್ಥಾನಕ್ಕೆ ಕೆಲವೇ ಮಂದಿ ಬರುತ್ತಿದ್ದರು. ಅದೇ ಆವರಣದಲ್ಲಿದ್ದ ಮಾನಸದೇವಿ ಹಾಗೂ ಮಹಾಕಾಳಿ ದೇವಸ್ಥಾನಗಳಿಗೆ ಭಕ್ತಾದಿಗಳು ಅಧಿಕ ಸಂಖ್ಯೆಯಲ್ಲಿ ಭೇಟಿ ನೀಡುತ್ತಿದ್ದರು. 'ಸತಿ' ವಿಗ್ರಹವನ್ನು ಪ್ರತಿಷ್ಠಾಪಿಸಿದವರು ಕಲ್ಲಿ ಪೆಹಲ್ವಾನ್ ಎಂಬುವವರು ಎಂದು ನನ್ನ ತಂದೆ ಹೇಳುತ್ತಿದ್ದರು. ಈ ಕಲ್ಲಿ ಪೆಹಲ್ವಾನ್ ಪೂಜೆ ಮಾಡುತ್ತಿದ್ದಾಗ ಬರೀ ಕಲ್ಲು ಚಪ್ಪಡಿಗೇಕೆ ಪೂಜೆ' ಎಂದು ತಂದೆ ಕೇಳಿದರಂತೆ. ಸುಮಾರು 16 ವರ್ಷಗಳ ನಂತರ ಮರಳಿ ಬಂದ ಕಲ್ಲಿಪೆಹಲ್ವಾನ್ ಕ್ಯಾನೊದೇವಿ ವಿಗ್ರಹವನ್ನು ಸ್ಥಾಪಿಸಿದರಂತೆ. ನಂತರ ಮಹಿಳೆಯರು ಆ ದೇವಿಯನ್ನು ಪೂಜಿಸುವುದು ಹೆಚ್ಚಾಯಿತು. 40 ದಿನಗಳ ಪೂಜೆ. ಉಪವಾಸ ವ್ರತದ ನಂತರ ಅವರಿಗೆ ಅವರ ಆಸೆ ಈಡೇರುವುದು ಎಂದು ಪೂಜಾರಿ ರಿಷಿ ಸಾರುತ್ತಾರೆ.

ಸತಿ ಪ್ರಚಾರದ ಆಕ್ಷೇಪಗಳನ್ನು ಒಪ್ಪದ ರಿಷಿ 'ಪ್ರತಿ ವರ್ಷ ಅಮಾವಾಸ್ಯೆ ಸಮಯದಲ್ಲಿ (ಆಗಸ್ಟ್, ಸೆಪ್ಟೆಂಬರ್) ಯಜ್ಞ ಮಾಡಲಾಗುವುದು. ಭಕ್ತಾದಿಗಳು ತಮಗೆ ತೋರಿದ ರೀತಿಯಲ್ಲಿ ಅಪಾರ ಹಣ ವೆಚ್ಚಮಾಡಿ ಪೂಜೆ ಮಾಡುವುದನ್ನು ನಾನು ಗಮನಿಸುತ್ತಿದ್ದೆ. ಅವರಿಗೆ ತಿಳಿಸಿಹೇಳಲೆಂದೇ ಈ ಪುಸ್ತಕ ಹೊರತಂದೆ. ಎನ್ನುತ್ತಾರೆ. ಸತಿಯನ್ನು ತಾವು ವೈಭವೀಕರಿಸುತ್ತಿಲ್ಲ ಎಂದು ಒತ್ತಿ ಹೇಳುವ ಅವರು ಸತಿಪೂಜೆ ಮೂಲಕ ಮಹಿಳೆಯರಿಗೆ ಸಂದೇಶವೊಂದನ್ನು ನೀಡುತ್ತಿರುವ ಅಂಶವನ್ನು ಒಪ್ಪಿಕೊಳ್ಳುತ್ತಾರೆ. ಅವರ (ಮಹಿಳೆಯರ) ಸಂತೋಷವು ಅವರ ಗಂಡಂದಿರ ಸಂತೋಷದ ಜೊತೆಗೆ ಮಿಲನಗೊಂಡಿದೆ. ಎಂಬುದನ್ನು ಅವರು ಅರಿಯಬೇಕೆಂಬುದೇ ನನ್ನ ಉದ್ದೇಶ ಎನ್ನುತ್ತಾರೆ ಪೂಜಾರಿ ರಿಷಿ.

'ಇದು ಜನರನ್ನು ಮೋಸ ಮಾಡುವ ಪರಿ. ಸತಿದೇವಿ ನಿಮ್ಮ ಇಷ್ಟಾರ್ಥಗಳನ್ನು ನೆರವೇರಿಸುತ್ತಾಳೆ ಎನ್ನುವುದೇ ಮೂಢನಂಬಿಕೆಯನ್ನು ಉತ್ತೇಜಿಸುವುದಾಗಿದೆ. ಎಂದು ಮಿರಾತ್ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರಜ್ಞೆಯಾಗಿರುವ ಕುಂತಲ್ ಅಗರ್‌ವಾಲ್ ಪ್ರತಿಕ್ರಿಯಿಸಿದ್ದಾರೆ.

'ವೈಭವೀ ಕಲಿಸಬೇಕಾದ ತ್ಯಾಗ ಇದೆಂದು ಹೇಳುವುದಾದರೆ, ಬ್ರಿಟಿಷರ ವಿರುದ್ಧ ಹೋರಾಡಿದ ರಾಣಿ ಲಕ್ಷ್ಮೀಬಾಯಿಗೆ ಏಕೆ ದೇವಸ್ಥಾನವಿಲ್ಲ ? ಕೃಷ್ಣನಲ್ಲಿನ ತನ್ನ ನಂಬಿಕೆಗಾಗಿ ಬಾಳನ್ನೇ ಮುಡುಪಾಗಿಟ್ಟ ಮೀರಾಗಾಗಿ ದೇವಸ್ಥಾನ ಏಕೆ ಇಲ್ಲ' ಎಂದು ಶಕುಂತಳಾ ಗೋಯಲ್ ಪ್ರಶ್ನಿಸುತ್ತಾರೆ. ಬಹುಶಃ ರಿಷಿ ಪೂಜಾರಿ ಅವರ ಬಳಿ ಇದಕ್ಕೆ ಉತ್ತರವಿಲ್ಲವೇನೋ !

- *ದೇವಿ*

*(ವಿವಿಧ ಮೂಲಗಳಿಂದ)*

# ಮನವಿ

ಕಳೆದ ಹದಿಮೂರು ವರ್ಷಗಳಿಂದ ನಿರಂತರವಾಗಿ ನಡೆದುಬರುತ್ತಿರುವ ಪತ್ರಿಕೆಯಾದ 'ಅಚಲ' ಮಹಿಳಾ ಜಾಗೃತಿಯ ಧ್ಯೇಯಕ್ಕೆ ಬದ್ಧವಾಗಿರುವ ಮಾಸಿಕ. ಕರ್ನಾಟಕದ ಎಲ್ಲ ಭಾಗಗಳಲ್ಲಿ ನಮ್ಮ ಚಂದಾದಾರರಿದ್ದಾರೆ; ನಾಡಿನ ಅನೇಕ ಹಿರಿಯ, ಕಿರಿಯ ಚಿಂತಕರು, ವಿಚಾರವಂತರು, ಸಾಹಿತಿಗಳು ಅಭಿಮಾನವಿಟ್ಟು ನಮ್ಮ ಪತ್ರಿಕೆಗೆ ಲೇಖನಗಳನ್ನು ಬರೆದುಕೊಟ್ಟಿದ್ದಾರೆ, ಕೊಡುತ್ತಿದ್ದಾರೆ. ಹೀಗಾಗಿ ಆರಂಭದಿಂದ ಇಂದಿನವರೆಗೆ ಒಂದು ಉನ್ನತ ಮಟ್ಟದ ವೈಚಾರಿಕ ಲೇಖನಗಳನ್ನು ಸಂಶೋಧನಾ ವರದಿಗಳನ್ನು ಹಲವು ಸಾಮಾಜಿಕ ಸಮಸ್ಯೆಗಳ ಚರ್ಚೆಯನ್ನು ಮಹಿಳೆಯರ ದೃಷ್ಟಿಯಿಂದ ನಾವು ಪ್ರಕಟಿಸುತ್ತಾ ಬಂದಿದ್ದೇವೆ.

ಆದರೆ ಧ್ಯೇಯಬದ್ಧ ಮಹಿಳಾ ಪತ್ರಿಕೆಗಳೇ ಅಭಾವವಾಗಿರುವ ಈ ನಾಡಿನಲ್ಲಿ 'ಅಚಲ' ದಂಥ ಪತ್ರಿಕೆಗೆ ಎಷ್ಟು ಪ್ರೋತ್ಸಹ ದೊರೆಯಬೇಕೋ ಅದು ಇದುವರೆಗೂ ದೊರೆತಿಲ್ಲ. ಚಂದಾಹಣವಲ್ಲದೆ ಬೇರೆ ಯಾವ ಆದಾಯಗಳೂ ನಮ್ಮ ಪತ್ರಿಕೆಗೆ ಇಲ್ಲ. ಆದ್ದರಿಂದ ಓದುಗರಲ್ಲಿ ನಾವು ವಿನಮ್ರವಾಗಿ ಭಿನ್ನವಿಸಿಕೊಳ್ಳುವುದೇನೆಂದರೆ ದಯವಿಟ್ಟು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನಮ್ಮ ಪತ್ರಿಕೆಗೆ ಚಂದಾದಾರರಾಗಿರಿ. ಈಗಾಗಲೇ ಚಂದಾದಾರರಾಗಿರುವವರು ದಯವಿಟ್ಟು ನವೀಕರಿಸಿರಿ.

CPMG/KA/BG-8/99

Book-Post/News Letter

To :

Smt/Sri

"ACHALA" 108, Skyline Surabhi,
14-P, Vidyapeeta Road, BSK III Stage,
Bangalore - 560 085